(2) ಖಾಸಗಿ ಅನುದಾನಿತ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರ ಸಂದರ್ಭದಲ್ಲಿ, ಸರ್ಕಾರವು, ಯಾವುದೇ ಖಾಸಗಿ ಅನುದಾನಿತ ಸಂಸ್ಥೆಯಲ್ಲಿ ಲಭ್ಯವಿರುವ ಸೂಕ್ತ ಖಾಲಿ ಸ್ಥಾನಗಳಿಗೆ ಪ್ರತಿಯಾಗಿ ಅಥವಾ ಇನ್ನು ಮುಂದೆ ಉಂಟಾಗುವ ಖಾಲಿ ಸ್ಥಾನಗಳಿಗೆ ಪ್ರತಿಯಾಗಿ ಅರ್ಹ ವ್ಯಕ್ತಿಗಳನ್ನು ವಿಲೀನಗೊಳಿಸಿಕೊಳ್ಳಲು ಅನುದಾನಿತ ಸಂಸ್ಥೆಗಳಿಗೆ ನಿರ್ದೇಶನ ನೀಡಬಹುದು.

**4. ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರ ವಿಲೀನಕ್ಕೆ ಸಂಬಂಧಿಸಿದ ಪ್ರಕ್ರಿಯೆ.–** (1) ರಾಜ್ಯ ಸರ್ಕಾರವು, ಈ ಅಧಿನಿಯಮದಲ್ಲಿ ನಿರ್ದಿಷ್ಟಪಡಿಸಿದ ಷರತ್ತುಗಳನ್ನು ಪೂರೈಸಿದಂಥ ಮತ್ತು ವಿಲೀನಕ್ಕೆ ಅರ್ಹರಾಗಿರುವಂಥ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರ ಹೆಸರುಗಳನ್ನು ರಾಜ್ಯ ಸರ್ಕಾರಕ್ಕೆ ಶಿಫಾರಸ್ಸು ಮಾಡುವ ಉದ್ದೇಶಕ್ಕಾಗಿ ಅದು ಅವಶ್ಯಕವೆಂದು ಭಾವಿಸಬಹುದಾದ ಅಂಥ ಸದಸ್ಯರ ಸಂಖ್ಯೆಯನ್ನು ಒಳಗೊಂಡ ಸಮಿತಿಯನ್ನು ರಚಿಸತಕ್ಕದ್ದು. ರಾಜ್ಯ ಸರ್ಕಾರವು, ಅಂಥ ಶಿಫಾರಸ್ಸನ್ನು ಸ್ವೀಕರಿಸಿದ ಮೇಲೆ, 3ನೇ ಪ್ರಕರಣದ ಅನುಸಾರವಾಗಿ ಸಮಿತಿಯು ಹಾಗೆ ಶಿಫಾರಸ್ಸು ಮಾಡಿದ ಹೆಸರುಗಳನ್ನು ಅಧಿಸೂಚಿಸತಕ್ಕದ್ದು.

(2) ಸರ್ಕಾರವು, ಖಾಸಗಿ ಅನುದಾನಿತ ಸಂಸ್ಥೆಗಳಲ್ಲಿ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರ ಸಂಬಂಧದಲ್ಲಿ, ಪ್ರತ್ಯೇಕವಾಗಿ ಅಂಥ ಒಂದು ಸಮಿತಿಯನ್ನು ರಚಿಸತಕ್ಕದ್ದು.

(3) ಸಮಿತಿಯು, ತನ್ನ ಸ್ವಂತ ಕಾರ್ಯವಿಧಾನವನ್ನು ನಿರ್ಧರಿಸತಕ್ಕದ್ದು.

(4) ಅರ್ಹ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರ ಹೆಸರುಗಳನ್ನು ಶಿಫಾರಸ್ಸು ಮಾಡುವ ಮತ್ತು ಅಂಥ ಹೆಸರುಗಳನ್ನು ಅಧಿಸೂಚಿಸುವ ಇಡೀ ಪ್ರಕ್ರಿಯೆಯನ್ನು ಸಾಧ್ಯವಾದಷ್ಟು, ಈ ಅಧಿನಿಯಮದ ಪ್ರಾರಂಭದ ದಿನಾಂಕದಿಂದ ಒಂದು ವರ್ಷದ ಒಳಗೆ ಪೂರ್ಣಗೊಳಿಸತಕ್ಕದ್ದು.

(5) ನೇಮಕಾತಿ ಪ್ರಾಧಿಕಾರವು, (1)ನೇ ಉಪ ಪ್ರಕರಣದ ಅಡಿಯಲ್ಲಿ ಅಧಿಸೂಚಿಸಿದ ವ್ಯಕ್ತಿಗಳ ಪೂರ್ವ ವೃತ್ತಾಂತಗಳನ್ನು ಸತ್ಯಾಪನೆ ಮಾಡಿದ ತರುವಾಯ ಮತ್ತು ನೇಮಕಾತಿಯ ಸೂಕ್ತತೆಯನ್ನು ಪರಿಶೀಲಿಸಿದ ತರುವಾಯ, ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ 10 ಮತ್ತು 12ನೇ ನಿಯಮಗಳಿಗನುಸಾರವಾಗಿ ಅಧಿಸೂಚಿಸಿದ ಸಮಾನ ಖಾಲಿ ಹುದ್ದೆಯಲ್ಲಿ ಅವರನ್ನು ವಿಲೀನಗೊಳಿಸತಕ್ಕದ್ದು:

ಪರಂತು, ಖಾಸಗಿ ಅನುದಾನಿತ ಸಂಸ್ಥೆಗಳ ಸಂಬಂಧದಲ್ಲಿ, ಅಂಥ ಸಂಸ್ಥೆಗಳಲ್ಲಿನ ನೇಮಕಾತಿ ಪ್ರಾಧಿಕಾರವು, ಆ ಸಂಸ್ಥೆಗಳಲ್ಲಿ ಲಭ್ಯವಿರುವ ಖಾಲಿ ಸ್ಥಾನಗಳಲ್ಲಿ ಅನುದಾನಿತ ಸಂಸ್ಥೆಗಳ ಅಧಿಸೂಚಿತ ವ್ಯಕ್ತಿಗಳನ್ನು ನೇಮಕ ಮಾಡತಕ್ಕದ್ದು.

**5. ಈ ನಿಯಮಗಳ ಅಡಿಯಲ್ಲಿ ವಿಲೀನಗೊಂಡ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರ ವೇತನ ನಿಗದಿ ಜ್ಯೇಷ್ಠತೆ ಹಾಗೂ ರಜೆ.–** (1) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನಲ್ಲಿ ಅಥವಾ ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978ರ (1990ರ ಕರ್ನಾಟಕ ಅಧಿನಿಯಮ 14) ಅಡಿಯಲ್ಲಿ ರಚಿಸಿದ ಅಥವಾ ರಚಿಸಲಾಗಿದೆ ಎಂದು ಭಾವಿಸಲಾದ ಸೇವಾ ಷರತ್ತುಗಳನ್ನು ನಿಯಂತ್ರಿಸುವ ಯಾವುದೇ ಇತರ ನಿಯಮಗಳಲ್ಲಿ ಏನೇ ಒಳಗೊಂಡಿದ್ದರೂ, ವಿಲೀನಗೊಂಡ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರನು ಕರ್ತವ್ಯಕ್ಕೆ ಹಾಜರಾದ ನಂತರ, ಈ ಅಧಿನಿಯಮದ ಅಡಿಯಲ್ಲಿ ಆತನ ಪ್ರಾರಂಭಿಕ ಮೂಲ ವೇತನವನ್ನು, ಆತನು ವಿಲೀನಗೊಂಡ ಹುದ್ದೆಯ ಪ್ರವರ್ಗದ ಕಾಲಿಕ ವೇತನ ಶ್ರೇಣಿಯ ಕನಿಷ್ಠಕ್ಕೆ ನಿಗದಿಗೊಳಿಸತಕ್ಕದ್ದು ಹಾಗೂ ತನ್ನ ವಿಲೀನಕ್ಕೆ ಮೊದಲು ಸಲ್ಲಿಸಿದ ಸೇವೆಯನ್ನು ವೇತನ, ಜ್ಯೇಷ್ಠತೆ ಹಾಗೂ ರಜೆ ಅಥವಾ ಪಿಂಚಣಿಗೆ ಸಂಬಂಧಿಸಿದಂತೆ ಲೆಕ್ಕಕ್ಕೆ ತೆಗೆದುಕೊಳ್ಳತಕ್ಕದ್ದಲ್ಲ:

ಪರಂತು, ಖಾಸಗಿ ಅನುದಾನಿತ ಸಂಸ್ಥೆಗಳ ಸಂಬಂಧದಲ್ಲಿ, ಹಾಗೆ ನೇಮಕಗೊಂಡ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರು ಅನುದಾನಿತ ಸಂಸ್ಥೆಗಳಲ್ಲಿಯ ಅಂತಹುದೇ ಸೌಲಭ್ಯಗಳಿಗೆ ಅರ್ಹರಾಗಿರತಕ್ಕದ್ದು.

(2) ಈ ಅಧಿನಿಯಮದ ಅಡಿಯಲ್ಲಿ ವಿಲೀನಗೊಂಡ ವ್ಯಕ್ತಿಗಳ ಪರಸ್ಪರ ಜ್ಯೇಷ್ಠತೆಯನ್ನು, ಐದು ವರ್ಷಗಳು ಪೂರ್ಣಗೊಂಡ ದಿನಾಂಕದಿಂದ ಸದರಿ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರ ಸೇವಾವಧಿಗೆ ಅನುಸಾರವಾಗಿ ನಿರ್ಧರಿಸತಕ್ಕದ್ದು ಮತ್ತು ಇಬ್ಬರು ಅಥವಾ ಹೆಚ್ಚು ವ್ಯಕ್ತಿಗಳ ಸೇವಾವಧಿಯು ಒಂದೇ ಆಗಿದ್ದಲ್ಲಿ, ವಯಸ್ಸು ಹೆಚ್ಚಾದ ವ್ಯಕ್ತಿಯನ್ನು ವಯಸ್ಸಿನಲ್ಲಿ ಕಿರಿಯನಾದಂಥ ವ್ಯಕ್ತಿಗಿಂತ ಹಿರಿಯನೆಂಬಂತೆ ಪರಿಗಣಿಸತಕ್ಕದ್ದು.

**6. ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರನ ನೇಮಕಾತಿಯ ನಿಷೇಧ.–** (1) ಈ ಅಧಿನಿಯಮವು ಆರಂಭವಾದ ದಿನಾಂಕದಂದು ಐದು ವರ್ಷಗಳ ಸೇವೆಯನ್ನು ಪೂರ್ಣಗೊಳಿಸಿರದ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರನನ್ನು, ಯಾವುದೇ ಸರ್ಕಾರಿ ಸೇವೆಯಲ್ಲಿ ಅಥವಾ ಯಾವುದೇ ಖಾಸಗಿ ಅನುದಾನಿತ ಸಂಸ್ಥೆಯಲ್ಲಿ ಮುಂದುವರೆಸತಕ್ಕದ್ದಲ್ಲ ಅಥವಾ ವಿಲೀನಗೊಳಿಸತಕ್ಕದ್ದಲ್ಲ.

(2) ಯಾವೊಬ್ಬ ವ್ಯಕ್ತಿಯನ್ನು, ಈ ಅಧಿನಿಯಮದ ಅಡಿಯಲ್ಲಿಯ ವಿಲೀನದ ಪ್ರಕ್ರಿಯೆಯು ಪೂರ್ಣಗೊಂಡ ದಿನಾಂಕದಂದು ಅಥವಾ ನಂತರ, ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರನಾಗಿ ನೇಮಕ ಮಾಡತಕ್ಕದ್ದಲ್ಲ ಅಥವಾ ಮುಂದುವರೆಸತಕ್ಕದ್ದಲ್ಲ.

(3) (1) ಮತ್ತು (2)ನೇ ಉಪಪ್ರಕರಣಗಳ ಉಪಬಂಧಗಳನ್ನು ಉಲ್ಲಂಘಿಸಿ, ಅರೆಕಾಲಿಕ ಆಧಾರದ ಮೇಲೆ ಯಾವೊಬ್ಬ ವ್ಯಕ್ತಿಯನ್ನು ನೇಮಕ ಮಾಡುವ ಅಥವಾ ತೊಡಗಿಸುವ ಯಾವೊಬ್ಬ ವ್ಯಕ್ತಿಯು ಅಥವಾ ನೇಮಕಾತಿ ಪ್ರಾಧಿಕಾರವು, ದುರ್ನಡತೆಯ ಶಿಸ್ತಿನ ಕ್ರಮಕ್ಕೆ ಬದ್ಧವಾಗತಕ್ಕದ್ದು.

**7. ಇತರ ನಿಯಮಗಳ ಅನ್ವಯ.–** ಕರ್ನಾಟಕ ಸಿವಿಲ್ ಸೇವಾ ನಿಯಮಗಳು, ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966 ಮತ್ತು ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978ರ (1990ರ ಕರ್ನಾಟಕ ಅಧಿನಿಯಮ 14) ಅಡಿಯಲ್ಲಿ ರಚಿಸಿದ ಅಥವಾ ರಚಿಸಲಾಗಿದೆಯೆಂದು ಭಾವಿಸಿದ ಸರ್ಕಾರಿ ನೌಕರರ ಸೇವಾ ಷರತ್ತುಗಳನ್ನು ವಿನಿಯಮಿಸುವ ಎಲ್ಲಾ ಇತರ ನಿಯಮಗಳು, ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಾಗದಿರುವಷ್ಟರ ಮಟ್ಟಿಗೆ, ಈ ಅಧಿನಿಯಮದ ಅಡಿಯಲ್ಲಿ ಸರ್ಕಾರದಲ್ಲಿ ವಿಲೀನಗೊಂಡ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರಿಗೆ ಅನ್ವಯವಾಗತಕ್ಕದ್ದು:

ಪರಂತು, ಖಾಸಗಿ ಅನುದಾನಿತ ಸಂಸ್ಥೆಗಳಲ್ಲಿಯ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರ ಸಂಬಂಧದಲ್ಲಿ, ಈ ಅಧಿನಿಯಮದ ಅಡಿಯಲ್ಲಿ ಹಾಗೆ ವಿಲೀನಗೊಂಡ ವ್ಯಕ್ತಿಗಳು ಅನುದಾನಿತ ಸಂಸ್ಥೆಗಳ ನೌಕರರಿಗೆ ಅನ್ವಯವಾಗುವಂಥ ನಿಯಮಗಳಿಗೆ ಒಳಪಡತಕ್ಕದ್ದು.

**8. ಸದ್ಭಾವನೆಯಿಂದ ಕೈಗೊಂಡ ಕ್ರಮದ ಸಂರಕ್ಷಣೆ.–** ಈ ಅಧಿನಿಯಮದ ಅಡಿಯಲ್ಲಿ ಸದ್ಭಾವನೆಯಿಂದ ಮಾಡಿದ ಅಥವಾ ಮಾಡಬೇಕಾದ ಯಾವುದೇ ಕಾರ್ಯದಲ್ಲಿ ಲೋಪ ಎಸಗಿದಲ್ಲಿ ಸರ್ಕಾರಿ ಅಧಿಕಾರಿಗಳ ವಿರುದ್ಧ, ಯಾವುದೇ ದಾವೆ, ವ್ಯಾಜ್ಯ ಅಥವಾ ಇತರ ಕಾನೂನು ವ್ಯವಹರಣೆಗಳನ್ನು ಹೂಡತಕ್ಕದ್ದಲ್ಲ.

**9. ನಿರ್ದೇಶನ ಮುಂತಾದವುಗಳನ್ನು ನೀಡುವ ಅಧಿಕಾರ.–** ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವಲ್ಲಿ ಯಾವುದೇ ತೊಂದರೆಯು ಉದ್ಭವಿಸಿದಲ್ಲಿ, ಸರ್ಕಾರವು, ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ, ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಾಗದಂತೆ ತೊಂದರೆಗಳನ್ನು ನಿವಾರಿಸಲು ಅವಶ್ಯಕ ಅಥವಾ ಯುಕ್ತವೆಂದು ಕಂಡುಬರುವಂಥ ಉಪಬಂಧಗಳನ್ನು ರಚಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಕೆ.ಬೋರೇಗೌಡ**
ಸರ್ಕಾರದ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

# ವಿಶೇಷ ಪತ್ರಿಕೆ

| | | |
|---|---|---|
| ಭಾಗ – **IV-A** | **ಬೆಂಗಳೂರು, ಬುಧವಾರ, ಏಪ್ರಿಲ್ ೬, ೨೦೧೧ (ಚೈತ್ರ ೧೬, ಶಕ ವರ್ಷ ೧೯೩೩)** | **ನಂ. ೪೦೩** |

**ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 37 ಶಾಸನ 2010, ಬೆಂಗಳೂರು, ದಿನಾಂಕ: 6ನೇ ಏಪ್ರಿಲ್, 2011**

The Karnataka Home Guards (Amendment) Bill, 2011 ಇದಕ್ಕೆ, 2011ರ ಏಪ್ರಿಲ್ ಮಾಹೆಯ ಎರಡನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2011ರ ಕರ್ನಾಟಕ ಅಧಿನಿಯಮ ಸಂಖ್ಯೆ:20 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

## KARNATAKA ACT NO 20 OF 2011

(First Published in the Karnataka Gazette Extra-ordinary on the Sixth day of April, 2011)

## THE KARNATAKA HOME GUARDS (AMENDMENT) ACT, 2011

(Received the assent of the Governor on the Second day of April, 2011)

An Act further to amend the Karnataka Home Guards Act, 1962.

Whereas it is expedient further to amend the Karnataka Home Guards Act, 1962 (Karnataka Act 35 of 1962) for the purpose, hereinafter appearing;

Be it enacted by the Karnataka State Legislature in the Sixty second year of the Republic of India as follows:-

**1. Short title and commencement,-** (1) This Act may be called the Karnataka Home Guards (Amendment) Act, 2011.

(2) It shall come into force at once.

**2. Amendment of Section 3,-** In the Karnataka Home Guards Act, 1962 (Karnataka Act 35 of 1962) in section 3, for sub- section (2c), the following shall be substituted, namely:-

"(2c) subject to the pleasure of the State Government the term of office of the commandant shall ordinarily be for five years and it may be extended for a further period of two terms of five years each.

Provided that no person shall be eligible for appointment as commandant or shall hold such office on his attaining the age of sixty years."

By Order and in the name of the Governor of Karnataka
**G.K. BOREGOWDA**
Secretary to Government,
Department of Parliamentary Affairs and Legislation

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಬುಧವಾರ, ಏಪ್ರಿಲ್ ೬, ೨೦೧೧ (ಚೈತ್ರ ೧೬, ಶಕ ವರ್ಷ ೧೯೩೩) | ನಂ. ೪೦೪ |
| --- | --- | --- |

**ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 08 ಶಾಸನ 2011, ಬೆಂಗಳೂರು, ದಿನಾಂಕ: 6ನೇ ಏಪ್ರಿಲ್, 2011**

ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ) (ವಿಶೇಷ ಉಪಬಂಧಗಳು) ವಿಧೇಯಕ, 2011 – ಇದಕ್ಕೆ 2011ರ ಏಪ್ರಿಲ್ ತಿಂಗಳ ಎರಡನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2011ರ ಕರ್ನಾಟಕ ಅಧಿನಿಯಮ ಸಂಖ್ಯೆ:23 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**2011ರ ಕರ್ನಾಟಕ ಅಧಿನಿಯಮ ಸಂಖ್ಯೆ 23**

(2011ರ ಏಪ್ರಿಲ್ ಆರನೇ ದಿನಾಂಕದಂದು ಕರ್ನಾಟಕ ರಾಜ್ಯಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)

## ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ) (ವಿಶೇಷ ಉಪಬಂಧಗಳು) ಅಧಿನಿಯಮ, 2011

(2011ರ ಏಪ್ರಿಲ್ ಎರಡನೇ ದಿನಾಂಕದಂದು ರಾಜ್ಯಪಾಲರ ಅನುಮತಿಯನ್ನು ಪಡೆಯಲಾಗಿದೆ)

ರಾಜ್ಯ ಸರ್ಕಾರ ಮತ್ತು ವೃತ್ತಿ ಶಿಕ್ಷಣ ಕೋರ್ಸುಗಳ ಶಿಕ್ಷಣ ನೀಡುತ್ತಿರುವ ಅನುದಾನಿತವಲ್ಲದ ಖಾಸಗಿ ಶಿಕ್ಷಣ ಸಂಸ್ಥೆಗಳ ನಡುವೆ ಮಾಡಿಕೊಳ್ಳಲಾದ ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದಕ್ಕೆ ಮಾನ್ಯತೆ ನೀಡುವುದಕ್ಕಾಗಿ ಮತ್ತು 2005 (6) ಎಸ್‌ಸಿಸಿ 537 ರಲ್ಲಿ ವರದಿಯಾದ ಪಿ.ಎ. ಇನಾಂದಾರ್ ಮತ್ತು ಇತರರು – ವಿರುದ್ಧ – ಮಹಾರಾಷ್ಟ್ರ ರಾಜ್ಯ – ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯವು ನೀಡಿದ ತೀರ್ಪಿನಲ್ಲಿ ಉಪಬಂಧಿಸಲಾದಂಥ ಇತರ ವಿಷಯಗಳಿಗೆ ಉಪಬಂಧ ಕಲ್ಪಿಸುವುದಕ್ಕಾಗಿ ಒಂದು ಅಧಿನಿಯಮ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಮತ್ತು ರಾಜ್ಯ ಸರ್ಕಾರವು, ಕರ್ನಾಟಕ ನಿವಾಸಿ ವಿದ್ಯಾರ್ಥಿಗಳ ಮತ್ತು ಶೈಕ್ಷಣಿಕವಾಗಿ ಮತ್ತು ಸಾಮಾಜಿಕವಾಗಿ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳ ಹಿತರಕ್ಷಣೆಗಾಗಿ 2008–09, 2009–10, 2010–11 ವರ್ಷದಲ್ಲಿ ಖಾಸಗಿ ಅನುದಾನಿತವಲ್ಲದ ವೃತ್ತಿ ಶಿಕ್ಷಣ ಸಂಸ್ಥೆಗಳೊಡನೆ ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದ ಮಾಡಿಕೊಂಡಿರುವುದರಿಂದ ಮತ್ತು 2011–12ನೇ ವರ್ಷದಲ್ಲಿ ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದ ಮಾಡಿಕೊಳ್ಳಲು ಉದ್ದೇಶಿಸಿರುವುದರಿಂದ ಮತ್ತು 2008–09, 2009–10, 2010–11 ಮತ್ತು 2011–12ನೇ ಶೈಕ್ಷಣಿಕ ವರ್ಷಗಳಿಗಾಗಿ ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ) ಅಧಿನಿಯಮ, 2006ನ್ನು (2006ರ ಕರ್ನಾಟಕ ಅಧಿನಿಯಮ 8) ತಡೆಹಿಡಿಯಬೇಕೆಂದು ಅಭಿಪ್ರಾಯ ಪಟ್ಟಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೆರಡನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

**1. ಸಂಕ್ಷಿಪ್ತ ಹೆಸರು, ಪ್ರಾರಂಭ ಮತ್ತು ಅನ್ವಯ.**– (1) ಈ ಅಧಿನಿಯಮವನ್ನು ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ) (ವಿಶೇಷ ಉಪಬಂಧಗಳು) ಅಧಿನಿಯಮ, 2011 ಎಂದು ಕರೆಯತಕ್ಕದ್ದು.

(2) ಇದು 2008ರ ಜೂನ್ 1ನೇ ದಿನಾಂಕದಿಂದ ಜಾರಿಗೆ ಬಂದಿರುವುದಾಗಿ ಭಾವಿಸತಕ್ಕದ್ದು.

(3) ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ) ಅಧಿನಿಯಮ, 2006 ರಲ್ಲಿ (2006ರ ಕರ್ನಾಟಕ ಅಧಿನಿಯಮ 8) ಏನೇ ಒಳಗೊಂಡಿದ್ದರೂ 2008–09, 2009–10, 2010–11 ಮತ್ತು 2011–12ನೇ ಶೈಕ್ಷಣಿಕ ವರ್ಷಕ್ಕಾಗಿ ಅನುದಾನಿತವಲ್ಲದ ಖಾಸಗಿ ವೃತ್ತಿ ಶಿಕ್ಷಣ ಸಂಸ್ಥೆಯಲ್ಲಿ ಪ್ರವೇಶಗಳು ಮತ್ತು ಶುಲ್ಕ ನಿಗದಿ ಈ ಅಧಿನಿಯಮದ ಉಪಬಂಧಗಳ ಅನುಸಾರವಾಗಿ ನಡೆಯತಕ್ಕದ್ದು.

**2. ಪರಿಭಾಷೆಗಳು.**– ಈ ಅಧಿನಿಯಮದಲ್ಲಿ ಸಂದರ್ಭಕ್ಕೆ ಅನ್ಯಥಾ ಅಗತ್ಯವಿದ್ದ ಹೊರತು,–

(ಎ) "ಸಾಮಾನ್ಯ ಪ್ರವೇಶ ಪರೀಕ್ಷೆ" ಎಂದರೆ, ಏಕಗವಾಕ್ಷಿ ಪ್ರಕ್ರಿಯೆಯ ಮೂಲಕ ವೃತ್ತಿ ಶಿಕ್ಷಣ ವ್ಯಾಸಂಗ ಕ್ರಮಗಳಿಗೆ ಪ್ರವೇಶ ನೀಡುವ ಉದ್ದೇಶಕ್ಕಾಗಿ ಅಭ್ಯರ್ಥಿಗಳ ಅರ್ಹತೆ (ಮೆರಿಟ್) ಯನ್ನು ನಿರ್ಧರಿಸುವುದಕ್ಕಾಗಿ ನಡೆಸಲಾಗುವ ಪರೀಕ್ಷೆ ಮತ್ತು ತರುವಾಯದ ಕೇಂದ್ರೀಯ ಕೌನ್ಸೆಲಿಂಗ್ ವ್ಯವಸ್ಥೆ;

(ಬಿ) "ಸಾಮಾನ್ಯ ಪ್ರವೇಶ ಪರೀಕ್ಷಾ ಘಟಕ" ಎಂದರೆ, ಸಾಮಾನ್ಯ ಪ್ರವೇಶ ಪರೀಕ್ಷೆ ನಡೆಸುವ ರಾಜ್ಯ ಸರ್ಕಾರದ ಒಂದು ಏಜನ್ಸಿ;

(ಸಿ) "ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದ" ಎಂದರೆ, ವೃತ್ತಿ ಶಿಕ್ಷಣ ಕೋರ್ಸುಗಳಿಗೆ ಪ್ರವೇಶ ಮತ್ತು ಶುಲ್ಕನಿಗದಿಗೆ ಸಂಬಂಧಿಸಿದಂತೆ ರಾಜ್ಯ ಸರ್ಕಾರ ಮತ್ತು ಅನುದಾನಿತವಲ್ಲದ ಖಾಸಗಿ ವೃತ್ತಿ ಶಿಕ್ಷಣ ಸಂಸ್ಥೆಗಳ ಸಂಘ ತಮ್ಮ ನಡುವೆ ಮಾಡಿಕೊಳ್ಳಬಹುದಾದ ಯಾವುದೇ ಒಪ್ಪಂದ;

(ಡಿ) "ಸಂಸ್ಥೆ" ಎಂದರೆ, ವೃತ್ತಿ ಶಿಕ್ಷಣ ಕೋರ್ಸ್‌ಗಳ ವಿದ್ಯಾಭ್ಯಾಸ ನೀಡುತ್ತಿರುವ ವೃತ್ತಿ ಶಿಕ್ಷಣ ಸಂಸ್ಥೆಗಳು;

(ಇ) "ಏಕ ಸದಸ್ಯ ನಿಯಂತ್ರಕ ಸಮಿತಿ" ಎಂದರೆ, 3ನೇ ಪ್ರಕರಣದ ಅಡಿಯಲ್ಲಿ ರಾಜ್ಯ ಸರ್ಕಾರವು ರಚಿಸಿದ ಸಮಿತಿ;

(ಎಫ್) "ವೃತ್ತಿ ಶಿಕ್ಷಣ ಕೋರ್ಸುಗಳು" ಎಂದರೆ,–

(I) ವೈದ್ಯಕೀಯ ಮತ್ತು ದಂತ ವೈದ್ಯ ಶಿಕ್ಷಣ ಸಂಸ್ಥೆಗಳಲ್ಲಿ,

(ಎ) ಬ್ಯಾಚುಲರ್ ಆಫ್ ಮೆಡಿಸಿನ್ ಮತ್ತು ಬ್ಯಾಚುಲರ್ ಆಫ್ ಸರ್ಜರಿ; ಮತ್ತು

(ಬಿ) ಬ್ಯಾಚುಲರ್ ಆಫ್ ಡೆಂಟಲ್ ಸರ್ಜರಿ

(II) ಇಂಜಿನಿಯರ್ ಸಂಸ್ಥೆಗಳಲ್ಲಿ,

(ಎ) ಬ್ಯಾಚುಲರ್ ಆಫ್ ಇಂಜಿನಿಯರಿಂಗ್;

(ಬಿ) ಬ್ಯಾಚುಲರ್ ಆಫ್ ಟೆಕ್ನಾಲಜಿ

(ಸಿ) ಬ್ಯಾಚುಲರ್ ಆಫ್ ಆರ್ಕಿಟೆಕ್ಚರ್;

(III) ರಾಜ್ಯ ಸರ್ಕಾರವು ಅಧಿಸೂಚಿಸಬಹುದಾದಂಥ ಇತರ ಕೋರ್ಸುಗಳು.

(ಜಿ) "ಅನುದಾನಿತವಲ್ಲದ ಸಂಸ್ಥೆ" ಎಂದರೆ, ರಾಜ್ಯ ಸರ್ಕಾರದಿಂದ ಯಾವುದೇ ಅನುದಾನವನ್ನು ಅಥವಾ ಸಹಾಯಾನುದಾನವನ್ನು ಸ್ವೀಕರಿಸದ ಯಾವುದೇ ಖಾಸಗಿ ಆಡಳಿತವುಳ್ಳ ವೃತ್ತಿಶಿಕ್ಷಣ ಸಂಸ್ಥೆ.

**3. ಏಕ ಸದಸ್ಯ ನಿಯಂತ್ರಕ ಸಮಿತಿಯ ರಚನೆ.–** ರಾಜ್ಯದ ಯಾವುದೇ ವಿಶ್ವವಿದ್ಯಾಲಯದ ಮಾಜಿ ಕುಲಪತಿಯವರು ಸದಸ್ಯರಾಗಿರುವ, ರಾಜ್ಯ ಸರ್ಕಾರವು ನೇಮಿಸಿದ ಒಂದು ಏಕ ಸದಸ್ಯ ನಿಯಂತ್ರಕ ಸಮಿತಿಯು ಇರತಕ್ಕದ್ದು. ಸದರಿ ಏಕಸದಸ್ಯ ನಿಯಂತ್ರಕ ಸಮಿತಿಯು, ವೃತ್ತಿಶಿಕ್ಷಣ ಕೋರ್ಸುಗಳಿಗೆ ಪ್ರವೇಶದ ಮತ್ತು ಸಮ್ಮತಾಭಿಪ್ರಾಯ ವ್ಯವಸ್ಥೆ ಅಥವಾ ಒಪ್ಪಂದದ ಅನುಷ್ಠಾನದ ಮೇಲ್ವಿಚಾರಣೆಯನ್ನು ನಡೆಸತಕ್ಕದ್ದು.

**4. ಶುಲ್ಕದ ನಿಗದಿ.–** ಈ ಅಧಿನಿಯಮದ ಪ್ರಾರಂಭದ ದಿನಾಂಕದಂದು ಜಾರಿಯಲ್ಲಿರುವ ವೃತ್ತಿ ಶಿಕ್ಷಣ ಸಂಸ್ಥೆಗಳ ಸಂಬಂಧದಲ್ಲಿ ನಿಗದಿಪಡಿಸಿದ ಶುಲ್ಕ ಏನೇ ಇದ್ದರೂ, ರಾಜ್ಯ ಸರ್ಕಾರವು, ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದದ ಅನುಸಾರವಾಗಿ, ಅಧಿಸೂಚನೆಯ ಮೂಲಕ, ಅನುದಾನಿತವಲ್ಲದ ಖಾಸಗಿ ವೃತ್ತಿ ಶಿಕ್ಷಣ ಸಂಸ್ಥೆಗಳ ಪ್ರವೇಶಕ್ಕೆ ಸಂದಾಯಮಾಡಬೇಕಾದ ಶುಲ್ಕವನ್ನು ನಿಗದಿಗೊಳಿಸಬಹುದು. ಬೇರೆ ಬೇರೆ ಪ್ರವರ್ಗದ ವಿದ್ಯಾರ್ಥಿಗಳಿಗೆ ಬೇರೆ ಬೇರೆ ಶುಲ್ಕದ ದರವನ್ನು ನಿಗದಿಗೊಳಿಸಬಹುದು.

**5. ಪ್ರವೇಶ ನಿಯಂತ್ರಣ ಮತ್ತು ಸೀಟು ಹಂಚಿಕೆ ಪ್ರಮಾಣ.–** ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದವನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವುದಕ್ಕಾಗಿ, ಖಾಸಗಿ ಅನುದಾನಿತವಲ್ಲದ ವೃತ್ತಿ ಶಿಕ್ಷಣ ಸಂಸ್ಥೆಯಲ್ಲಿ ಸೀಟುಗಳನ್ನು ಈ ಮುಂದಿನ ರೀತಿಯಲ್ಲಿ ಭರ್ತಿ ಮಾಡತಕ್ಕದ್ದು, ಎಂದರೆ:–

(I) (i) 2008–09ನೇ ಶೈಕ್ಷಣಿಕ ವರ್ಷಕ್ಕಾಗಿ ಪ್ರವೇಶಾವಕಾಶವಿರುವ ಒಟ್ಟು ಸೀಟುಗಳ ಪೈಕಿ,–

(ಎ) ಅಲ್ಪಸಂಖ್ಯಾತರದಲ್ಲದ ಸಂಸ್ಥೆಗಳು ನಡೆಸುತ್ತಿರುವ ಇಂಜಿನಿಯರಿಂಗ್ ಕೋರ್ಸ್‌ಗಳಲ್ಲಿ ಒಟ್ಟು ಸೀಟುಗಳ ಶೇಕಡ ಐವತ್ತೈದರಷ್ಟಕ್ಕೆ ಕಡಿಮೆಯಲ್ಲದಷ್ಟನ್ನು; ಮತ್ತು

(ಬಿ) ಅಲ್ಪಸಂಖ್ಯಾತರ ಸಂಸ್ಥೆಗಳು ನಡೆಸುತ್ತಿರುವ ಇಂಜಿನಿಯರಿಂಗ್ ಕೋರ್ಸ್‌ಗಳಲ್ಲಿ ಒಟ್ಟು ಸೀಟುಗಳ ಶೇಕಡಾ ನಲವತ್ತೈದರಷ್ಟಕ್ಕೆ ಕಡಿಮೆಯಲ್ಲದಷ್ಟನ್ನು,

(ಸಿ) ಅಲ್ಪಸಂಖ್ಯಾತರದಲ್ಲದ ಸಂಸ್ಥೆಗಳು ನಡೆಸುತ್ತಿರುವ ವೈದ್ಯಕೀಯ ಕೋರ್ಸ್‌ಗಳಲ್ಲಿ ಒಟ್ಟು ಸೀಟುಗಳ ಶೇಕಡಾ ನಲವತ್ತರಷ್ಟಕ್ಕೆ ಕಡಿಮೆಯಲ್ಲದಷ್ಟನ್ನು; ಮತ್ತು

(ಡಿ) ಅಲ್ಪಸಂಖ್ಯಾತರ ಸಂಸ್ಥೆಗಳು ನಡೆಸುತ್ತಿರುವ ವೈದ್ಯಕೀಯ ಕೋರ್ಸ್‌ಗಳಲ್ಲಿ ಒಟ್ಟು ಸೀಟುಗಳ ಶೇಕಡಾ ಇಪ್ಪತ್ತೈದರಷ್ಟಕ್ಕೆ ಕಡಿಮೆಯಲ್ಲದಷ್ಟನ್ನು,

(ಇ) ಅಲ್ಪಸಂಖ್ಯಾತರದಲ್ಲದ ಸಂಸ್ಥೆಗಳು ನಡೆಸುತ್ತಿರುವ ದಂತವೈದ್ಯಕೀಯ ಕೋರ್ಸುಗಳಲ್ಲಿ ಒಟ್ಟು ಸೀಟುಗಳ ಶೇಕಡಾ ಮೂವತ್ತೈದರಷ್ಟಕ್ಕೆ ಕಡಿಮೆಯಲ್ಲದಷ್ಟನ್ನು;

(ಎಫ್) ಅಲ್ಪ ಸಂಖ್ಯಾತರ ಸಂಸ್ಥೆಗಳು ನಡೆಸುತ್ತಿರುವ ದಂತ ವೈದ್ಯಕೀಯ ಕೋರ್ಸುಗಳಲ್ಲಿ ಒಟ್ಟು ಸೀಟುಗಳ ಶೇಕಡಾ ಇಪ್ಪತ್ತೈದರಷ್ಟಕ್ಕೆ ಕಡಿಮೆಯಲ್ಲದಷ್ಟನ್ನು;

(ii) 2009–10ನೇ ಶೈಕ್ಷಣಿಕ ವರ್ಷಕ್ಕಾಗಿ ಪ್ರವೇಶಾವಕಾಶವಿರುವ ಒಟ್ಟು ಸೀಟುಗಳ ಪೈಕಿ,–

(ಎ) ಅಲ್ಪಸಂಖ್ಯಾತರದಲ್ಲದ ಸಂಸ್ಥೆಗಳು ನಡೆಸುತ್ತಿರುವ ಇಂಜಿನಿಯರಿಂಗ್ ಕೋರ್ಸ್‌ಗಳಲ್ಲಿ ಒಟ್ಟು ಸೀಟುಗಳ ಶೇಕಡ ಐವತ್ತರಷ್ಟಕ್ಕೆ ಕಡಿಮೆಯಲ್ಲದಷ್ಟನ್ನು; ಮತ್ತು

(ಬಿ) ಅಲ್ಪಸಂಖ್ಯಾತರ ಸಂಸ್ಥೆಗಳು ನಡೆಸುತ್ತಿರುವ ಇಂಜಿನಿಯರಿಂಗ್ ಕೋರ್ಸ್‌ಗಳಲ್ಲಿ ಒಟ್ಟು ಸೀಟುಗಳ ಶೇಕಡಾ ನಲವತ್ತೈದರಷ್ಟಕ್ಕೆ ಕಡಿಮೆಯಲ್ಲದಷ್ಟನ್ನು,

(ಸಿ) ಅಲ್ಪಸಂಖ್ಯಾತರದಲ್ಲದ ಸಂಸ್ಥೆಗಳು ನಡೆಸುತ್ತಿರುವ ವೈದ್ಯಕೀಯ ಕೋರ್ಸ್‌ಗಳಲ್ಲಿ ಒಟ್ಟು ಸೀಟುಗಳ ಶೇಕಡಾ ನಲವತ್ತೆರಡರಷ್ಟಕ್ಕೆ ಕಡಿಮೆಯಲ್ಲದಷ್ಟನ್ನು; ಮತ್ತು

(ಡಿ) ಅಲ್ಪಸಂಖ್ಯಾತರ ಸಂಸ್ಥೆಗಳು ನಡೆಸುತ್ತಿರುವ ವೈದ್ಯಕೀಯ ಕೋರ್ಸ್‌ಗಳಲ್ಲಿ ಒಟ್ಟು ಸೀಟುಗಳ ಶೇಕಡಾ ಇಪ್ಪತ್ತೇಳರಷ್ಟಕ್ಕೆ ಕಡಿಮೆಯಲ್ಲದಷ್ಟನ್ನು,

(ಇ) ಅಲ್ಪಸಂಖ್ಯಾತರದಲ್ಲದ ಸಂಸ್ಥೆಗಳು ನಡೆಸುತ್ತಿರುವ ದಂತವೈದ್ಯಕೀಯ ಕೋರ್ಸುಗಳಲ್ಲಿ ಒಟ್ಟು ಸೀಟುಗಳ ಶೇಕಡಾ ಮೂವತ್ತೈದರಷ್ಟಕ್ಕೆ ಕಡಿಮೆಯಲ್ಲದಷ್ಟನ್ನು;

(ಎಫ್) ಅಲ್ಪ ಸಂಖ್ಯಾತರ ಸಂಸ್ಥೆಗಳು ನಡೆಸುತ್ತಿರುವ ದಂತ ವೈದ್ಯಕೀಯ ಕೋರ್ಸುಗಳಲ್ಲಿ ಒಟ್ಟು ಸೀಟುಗಳ ಶೇಕಡಾ ಇಪ್ಪತ್ತೈದರಷ್ಟಕ್ಕೆ ಕಡಿಮೆಯಲ್ಲದಷ್ಟನ್ನು;

(iii) 2010-11ನೇ ಶೈಕ್ಷಣಿಕ ವರ್ಷಕ್ಕಾಗಿ ಪ್ರವೇಶಾವಕಾಶವಿರುವ ಒಟ್ಟು ಸೀಟುಗಳ ಪೈಕಿ,-

(ಎ) ಅಲ್ಪಸಂಖ್ಯಾತರದಲ್ಲದ ಸಂಸ್ಥೆಗಳು ನಡೆಸುತ್ತಿರುವ ಇಂಜಿನಿಯರಿಂಗ್ ಕೋರ್ಸ್‌ಗಳಲ್ಲಿ ಒಟ್ಟು ಸೀಟುಗಳ ಶೇಕಡ ಐವತ್ತರಷ್ಟಕ್ಕೆ ಕಡಿಮೆಯಲ್ಲದಷ್ಟನ್ನು; ಮತ್ತು

(ಬಿ) ಅಲ್ಪಸಂಖ್ಯಾತರ ಸಂಸ್ಥೆಗಳು ನಡೆಸುತ್ತಿರುವ ಇಂಜಿನಿಯರಿಂಗ್ ಕೋರ್ಸ್‌ಗಳಲ್ಲಿ ಒಟ್ಟು ಸೀಟುಗಳ ಶೇಕಡಾ ನಲವತ್ತರಷ್ಟಕ್ಕೆ ಕಡಿಮೆಯಲ್ಲದಷ್ಟನ್ನು,

(ಸಿ) ಅಲ್ಪಸಂಖ್ಯಾತರದಲ್ಲದ ಸಂಸ್ಥೆಗಳು ನಡೆಸುತ್ತಿರುವ ವೈದ್ಯಕೀಯ ಕೋರ್ಸ್‌ಗಳಲ್ಲಿ ಒಟ್ಟು ಸೀಟುಗಳ ಶೇಕಡಾ ನಲವತ್ತೆರಡರಷ್ಟಕ್ಕೆ ಕಡಿಮೆಯಲ್ಲದಷ್ಟನ್ನು; ಮತ್ತು

(ಡಿ) ಅಲ್ಪಸಂಖ್ಯಾತರ ಸಂಸ್ಥೆಗಳು ನಡೆಸುತ್ತಿರುವ ವೈದ್ಯಕೀಯ ಕೋರ್ಸ್‌ಗಳಲ್ಲಿ ಒಟ್ಟು ಸೀಟುಗಳ ಶೇಕಡಾ ಇಪ್ಪತ್ತೇಳರಷ್ಟಕ್ಕೆ ಕಡಿಮೆಯಲ್ಲದಷ್ಟನ್ನು,

(ಇ) ಅಲ್ಪಸಂಖ್ಯಾತರದಲ್ಲದ ಸಂಸ್ಥೆಗಳು ನಡೆಸುತ್ತಿರುವ ದಂತವೈದ್ಯಕೀಯ ಕೋರ್ಸುಗಳಲ್ಲಿ ಒಟ್ಟು ಸೀಟುಗಳ ಶೇಕಡಾ ಮೂವತ್ತೈದರಷ್ಟಕ್ಕೆ ಕಡಿಮೆಯಲ್ಲದಷ್ಟನ್ನು;

(ಎಫ್) ಅಲ್ಪ ಸಂಖ್ಯಾತರ ಸಂಸ್ಥೆಗಳು ನಡೆಸುತ್ತಿರುವ ದಂತ ವೈದ್ಯಕೀಯ ಕೋರ್ಸುಗಳಲ್ಲಿ ಒಟ್ಟು ಸೀಟುಗಳ ಶೇಕಡಾ ಇಪ್ಪತ್ತೈದರಷ್ಟಕ್ಕೆ ಕಡಿಮೆಯಲ್ಲದಷ್ಟನ್ನು;

(ಜಿ) ಅಲ್ಪಸಂಖ್ಯಾತರ ಮತ್ತು ಅಲ್ಪ ಸಂಖ್ಯಾತರದಲ್ಲದ ಸಂಸ್ಥೆಗಳು ನಡೆಸುತ್ತಿರುವ ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಕೋರ್ಸುಗಳಲ್ಲಿ ಒಟ್ಟು ಸೀಟುಗಳ ಶೇಕಡಾ ಇಪ್ಪತ್ತರಷ್ಟಕ್ಕೆ ಕಡಿಮೆಯಲ್ಲದಷ್ಟನ್ನು,

(iv) 2011-12ನೇ ವರ್ಷಕ್ಕೆ, ಸರ್ಕಾರವು ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದದಡಿಯಲ್ಲಿ ಒಪ್ಪಬಹುದಾದಂಥ ಸಂಖ್ಯೆಯ ಸೀಟುಗಳನ್ನು;

- ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳಲ್ಲಿ ಸರ್ಕಾರಿ ಸೀಟುಗಳಿಗೆ ಪ್ರವೇಶಕ್ಕಾಗಿ ವಿದ್ಯಾರ್ಥಿಗಳ ಆಯ್ಕೆ ನಿಯಮಗಳು, 2006ಕ್ಕೆ ಅನುಸಾರವಾಗಿ ಸರ್ಕಾರಿ ಸಾಮಾನ್ಯ ಪ್ರವೇಶ ಪರೀಕ್ಷೆ ಘಟಕದ ಮೂಲಕ ತುಂಬತಕ್ಕದ್ದು.

(II) ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದದಲ್ಲಿ ಅನ್ಯಥಾ ನಿರ್ದಿಷ್ಟಪಡಿಸಿದ ಹೊರತು, ಉಳಿದ ಸೀಟುಗಳನ್ನು ನಿಯಮಿಸಬಹುದಾದಂಥ ನಿಯಮಗಳಿಗೆ ಒಳಪಟ್ಟು ನಿರ್ಧರಿಸಲಾದ ಅರ್ಹತೆಯ ಆಧಾರದ ಮೇಲೆ ನ್ಯಾಯಯುತ ಹಾಗೂ ಪಾರದರ್ಶಕ ರೀತಿಯಲ್ಲಿ ಸಂದರ್ಭಾನುಸಾರ ಖಾಸಗಿ ವೃತ್ತಿ ಶಿಕ್ಷಣ ಸಂಸ್ಥೆಗಳ ಸಂಘ ಅಥವಾ ಧಾರ್ಮಿಕ ಮತ್ತು ಭಾಷಾ ಅಲ್ಪಸಂಖ್ಯಾತರ ಸಂಸ್ಥೆಗಳ ಸಂಘ ನಡೆಸಿದ ಸಾಮಾನ್ಯ ಪ್ರವೇಶ ಪರೀಕ್ಷೆ ಹಾಗೂ ತರುವಾಯ ನಡೆಸಲಾಗುವ ಕೇಂದ್ರೀಯ ಕೌನ್ಸಿಲಿಂಗ್ ಮೂಲಕ ತುಂಬತಕ್ಕದ್ದು.

(2) ರಾಜ್ಯಸರ್ಕಾರದ ಮೀಸಲಾತಿ ನೀತಿ ಮತ್ತು ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದಕ್ಕೆ ಒಳಪಟ್ಟು, ರಾಜ್ಯ ಸರ್ಕಾರವು ವಿವಿಧ ಪ್ರವರ್ಗದ ಸಂಸ್ಥೆಗಳ ಸಂಬಂಧದಲ್ಲಿ ವಿವಿಧ ಪ್ರವರ್ಗದ ವಿದ್ಯಾರ್ಥಿಗಳನ್ನು ಸಾಮಾನ್ಯ ಪ್ರವೇಶ ಪರೀಕ್ಷಾ ಘಟಕದವರು ಹಾಗೂ ಆಡಳಿತ ಮಂಡಳಿಯವರು ತುಂಬಬೇಕಾದ ಸೀಟುಗಳ ಹಂಚಿಕೆ ಪ್ರಮಾಣವನ್ನು ಅಧಿಸೂಚನೆಯ ಮೂಲಕ ಪ್ರಕಟಿಸಬಹುದು.

**6. ಈ ಅಧಿನಿಯಮವನ್ನು ಉಲ್ಲಂಘಿಸಿ ಮಾಡಿದ ಪ್ರವೇಶಗಳು ಅಸಿಂಧುವಾಗಿರುವುದು.**- ಈ ಅಧಿನಿಯಮದ ಉಪಬಂಧಗಳನ್ನು ಅಥವಾ ಸಮ್ಮತಾಭಿಪ್ರಾಯ ವ್ಯವಸ್ಥೆ ಅಥವಾ ಒಪ್ಪಂದವನ್ನು ಉಲ್ಲಂಘಿಸಿ ಯಾವುವೇ ಖಾಸಗಿ ಅನುದಾನಿತವಲ್ಲದ ವೃತ್ತಿ ಶಿಕ್ಷಣ ಸಂಸ್ಥೆಗಳು 2008-09, 2009-10, 2010-11 ಮತ್ತು 2011-12ನೇ ಶೈಕ್ಷಣಿಕ ವರ್ಷಕ್ಕಾಗಿ ಈ ಅಧಿನಿಯಮದ ಪ್ರಾರಂಭಕ್ಕೆ ಮೊದಲು ಅಥವಾ ತರುವಾಯ ಮಾಡಿದ ಎಲ್ಲ ಪ್ರವೇಶಗಳು ಅಸಿಂಧುವಾಗಿರತಕ್ಕದ್ದು. ಅಂಥ ಉಲ್ಲಂಘನೆಯ ಸಂಬಂಧದಲ್ಲಿ ರಾಜ್ಯ ಸರ್ಕಾರವು ಅಂಥ ಪ್ರವೇಶಗಳನ್ನು ಅಥವಾ ಸಂದರ್ಭಾನುಸಾರ ಅಂಥ ಸಂಸ್ಥೆಯ ಸಂಯೋಜನೆಯನ್ನು ರದ್ದುಪಡಿಸುವುದಕ್ಕೆ ಸಂಬಂಧಪಟ್ಟ ವಿಶ್ವವಿದ್ಯಾಲಯಕ್ಕೆ ನಿರ್ದೇಶಿಸಬಹುದು.

**7. ತೊಂದರೆಗಳನ್ನು ನಿವಾರಿಸುವ ಅಧಿಕಾರ.**- ಈ ಅಧಿನಿಯಮದ ಉಪಬಂಧಗಳನ್ನು ಕಾರ್ಯರೂಪಕ್ಕೆ ತರುವಲ್ಲಿ ಯಾವುದೇ ತೊಂದರೆ ಉದ್ಭವಿಸಿದಲ್ಲಿ, ರಾಜ್ಯಸರ್ಕಾರವು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಿದ ಆದೇಶದ ಮೂಲಕ, ತೊಂದರೆಗಳನ್ನು ನಿವಾರಿಸಲು ತನಗೆ ಅವಶ್ಯಕ ಅಥವಾ ಯುಕ್ತವೆಂದು ಕಂಡುಬರುವ ಮತ್ತು ಈ ಅಧಿನಿಯಮದ ಉದ್ದೇಶಗಳಿಗೆ ಅಸಂಗತವಾಗಿರದಂಥ ಉಪಬಂಧಗಳನ್ನು ರಚಿಸಬಹುದು.

**8. ನಿಯಮಗಳ ರಚನಾಧಿಕಾರ.**- (1) ರಾಜ್ಯ ಸರ್ಕಾರವು, ಈ ಅಧಿನಿಯಮದ ಉದ್ದೇಶಗಳನ್ನು ನೆರವೇರಿಸುವುದಕ್ಕಾಗಿ, ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ ಪೂರ್ವಾನ್ವಯವಾಗಿ ಅಥವಾ ಉತ್ತರಾನ್ವಯವಾಗಿ, ನಿಯಮಗಳನ್ನು ರಚಿಸಬಹುದು.

(2) ಈ ಅಧಿನಿಯಮದ ಅಡಿಯಲ್ಲಿ ರಚಿಸಿದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ ಸಾಧ್ಯವಾದಷ್ಟು ಬೇಗನೇ ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ, ಅದು ಒಂದು ಅಧಿವೇಶನ ಅಥವಾ ಎರಡು ನಿರಂತರ ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳವರೆಗೆ ಅಧಿವೇಶನದಲ್ಲಿರುವಾಗ, ಮಂಡಿಸತಕ್ಕದ್ದು ಮತ್ತು ಅದನ್ನು ಹಾಗೆ ಮಂಡಿಸಿದ ಅಧಿವೇಶನ ಅಥವಾ ನಿಕಟೋತ್ತರ ಅಧಿವೇಶನಗಳು ಮುಕ್ತಾಯವಾಗುವ ಮೊದಲು, ವಿಧಾನಮಂಡಲದ ಉಭಯಸದನಗಳು ನಿಯಮದಲ್ಲಿ ಯಾವುದೇ ಮಾರ್ಪಾಟುಮಾಡಬೇಕೆಂದು ಒಪ್ಪಿದರೆ ಅಥವಾ ನಿಯಮವನ್ನು ರಚಿಸಬಾರದೆಂದು ತೀರ್ಮಾನಿಸಿದರೆ, ಆ ತರುವಾಯ ಅಂಥ ನಿಯಮವು ಸಂದರ್ಭಾನುಸಾರ ಹಾಗೆ ಮಾರ್ಪಾಟಾದ ರೀತಿಯಲ್ಲಿ ಮಾತ್ರ ಪರಿಣಾಮಕಾರಿಯಾಗಿರತಕ್ಕದ್ದು ಅಥವಾ ಪರಿಣಾಮಕಾರಿಯಾಗತಕ್ಕದ್ದಲ್ಲ. ಆದಾಗ್ಯೂ, ಅಂಥ ಮಾರ್ಪಾಟು ಅಥವಾ ರದ್ದತಿಯು ಆ ನಿಯಮದ ಅಡಿಯಲ್ಲಿ ಈ ಹಿಂದೆ ಮಾಡಿದ ಯಾವುದೇ ಕಾರ್ಯದ ಸಿಂಧುತ್ವಕ್ಕೆ ಬಾಧಕವಾಗತಕ್ಕದ್ದಲ್ಲ.

**9. ಪ್ರವೇಶಗಳು ಮತ್ತು ಶುಲ್ಕದ ಸಂಗ್ರಹಣೆಯ ಸಿಂಧುತ್ವ ಇತ್ಯಾದಿ.–** ಯಾವುದೇ ನ್ಯಾಯಾಲಯ, ನ್ಯಾಯಾಧೀಕರಣ ಅಥವಾ ಯಾವುದೇ ತೀರ್ಪು, ಡಿಕ್ರಿ ಅಥವಾ ಆದೇಶದಲ್ಲಿ ಇದಕ್ಕೆ ವಿರುದ್ಧವಾದುದು ಏನೇ ಇದ್ದರೂ, ವೃತ್ತಿ ಶಿಕ್ಷಣ ಸಂಸ್ಥೆಗಳು ಅಥವಾ ರಾಜ್ಯ ಸರ್ಕಾರವು ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದ ಅಥವಾ ಈ ಅಧಿನಿಯಮದ ಉಪಬಂಧಗಳಿಗನುಸಾರವಾಗಿ 2008ರ ಜೂನ್ 1ನೇ ದಿನಾಂಕದಿಂದ ಜಾರಿಗೆ ಬರುವಂತೆ ಮಾಡಿದ ಅಥವಾ ಮಾಡಲಾಗಿದೆ ಎಂದು ಭಾವಿಸಲಾದ ಎಲ್ಲಾ ಪ್ರವೇಶಗಳು ಅಥವಾ ಸಂಗ್ರಹಿಸಿದ ಶುಲ್ಕವನ್ನು ಈ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ ಅಂಥ ಪ್ರವೇಶಗಳನ್ನು ಅಥವಾ ಶುಲ್ಕದ ಸಂಗ್ರಹಣೆಯನ್ನು ಮಾಡಲಾಗಿದ್ದರೆ, ಹೇಗೋ ಹಾಗೆ ಸಿಂಧುವಾಗಿರತಕ್ಕದ್ದು.

(ಎ) ವೃತ್ತಿ ಶಿಕ್ಷಣ ಸಂಸ್ಥೆಗಳಿಂದ ಅಥವಾ ಪ್ರವೇಶಗಳು ಮತ್ತು ಶುಲ್ಕಗಳ ಸಂಗ್ರಹಣೆಯ ಸಂಬಂಧದಲ್ಲಿ ರಾಜ್ಯ ಸರ್ಕಾರವು ಕೈಗೊಂಡ ಅಥವಾ ನಡೆಸಿದ ಎಲ್ಲ ಕ್ರಮಗಳು, ವ್ಯವಹರಣೆಗಳು ಅಥವಾ ಕಾರ್ಯಗಳನ್ನು, ಕಾನೂನಿನ ಪ್ರಕಾರ ಕೈಗೊಳ್ಳಲಾಗಿದೆ ಮತ್ತು ನಡೆಸಲಾಗಿದೆ ಎಂದು ಮತ್ತು ಯಾವಾಗಲೂ ಹಾಗೆ ಕೈಗೊಳ್ಳಲಾಗಿದೆ ಅಥವಾ ನಡೆಸಲಾಗಿದೆ ಎಂದು ಭಾವಿಸತಕ್ಕದ್ದು.

(ಬಿ) ಅಂಥ ಯಾವುದೇ ಶುಲ್ಕದ ಮರುಪಾವತಿಗಾಗಿ ಯಾವುದೇ ನ್ಯಾಯಾಲಯ ಅಥವಾ ನ್ಯಾಯಾಧಿಕರಣ ಅಥವಾ ಯಾವುದೇ ಪ್ರಾಧಿಕಾರದ ಮುಂದೆ ಯಾವುದೇ ದಾವೆ ಅಥವಾ ಇತರ ವ್ಯವಹರಣೆಗಳನ್ನು ನಡೆಸತಕ್ಕದ್ದಲ್ಲ ಅಥವಾ ಮುಂದುವರಿಸತಕ್ಕದ್ದಲ್ಲ; ಮತ್ತು

(ಸಿ) ಯಾವುದೇ ಅಂಥ ಶುಲ್ಕದ ಮರುಪಾವತಿಗೆ ನಿರ್ದೇಶಿಸಿ ಯಾವ ನ್ಯಾಯಾಲಯವೂ ಯಾವುದೇ ಡಿಕ್ರಿ ಅಥವಾ ಆದೇಶವನ್ನು ಜಾರಿ ಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ.ಬೋರೇಗೌಡ**
ಸರ್ಕಾರದ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

# ವಿಶೇಷ ಪತ್ರಿಕೆ


| ಭಾಗ – IV-A | ಬೆಂಗಳೂರು, ಬುಧವಾರ, ಏಪ್ರಿಲ್ ೬, ೨೦೧೧ (ಚೈತ್ರ ೧೬, ಶಕ ವರ್ಷ ೧೯೩೩) | ನಂ. ೪೦೫ |
|---|---|---|


**ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 19 ಶಾಸನ 2011, ಬೆಂಗಳೂರು, ದಿನಾಂಕ: 6ನೇ ಏಪ್ರಿಲ್, 2011**

The Karnataka Government Parks (Preservation)(Amendment) Bill, 2011 ಇದಕ್ಕೆ, 2011ರ ಏಪ್ರಿಲ್ ಮಾಹೆಯ ಎರಡನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2011ರ ಕರ್ನಾಟಕ ಅಧಿನಿಯಮ ಸಂಖ್ಯೆ: 21 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

## KARNATAKA ACT NO 21 OF 2011

(First Published in the Karnataka Gazette Extra-ordinary on the sixth day of April, 2011)

## THE KARNATAKA GOVERNMENT PARKS (PRESERVATION) (AMENDMENT) ACT, 2011

(Received the assent of the Governor on the second day of April, 2011)

An Act further to amend the Karnataka Government Parks (Preservation) Act, 1975.

Whereas it is expedient further to amend the Karnataka Government Parks (Preservation) Act, 1975 (Karnataka Act 23 of 1975) for the purposes hereinafter appearing;

Be it enacted by the Karnataka State Legislature in the sixty second year of the Republic of India, as follows:-

**1. Short title and commencement.-** (1) This Act may be called the Karnataka Government Parks (Preservation) (Amendment) Act, 2011.

(2) It shall come into force at once.

**2. Amendment of section 5.-** In the Karnataka Government Parks (Preservation) Act, 1975 (Karnataka Act 23 of 1975), in section 5, after clause (d), the following shall be inserted, namely:-

"(e) 18028.35 Square meters between High Court Building and Old KGID Building surrounded by,-

| | |
|---|---|
| East: | K.G.I.D. Building and High Court Building Security fence 120.65 meters. |
| West: | Ambedhakar Veedhi 170.68 meters. |
| North: | K.G.I.D. road to Ambedhakar Veedhi. 137.27 meters. |
| South: | High Court Building and Road leading from Ambedhakar Veedhi to High Court Building Security fence 170.42 meters. |

to park the Vehicles of High Court Advocates and visitors".

By Order and in the name of the Governor of Karnataka

**G.K. BOREGOWDA**
Secretary to Government,
Department of Parliamentary Affairs and Legislation

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಬುಧವಾರ, ಏಪ್ರಿಲ್ ೬, ೨೦೧೧ (ಚೈತ್ರ ೧೬, ಶಕ ವರ್ಷ ೧೯೩೩) | ನಂ. ೪೦೬ |
|---|---|---|

**ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 41 ಶಾಸನ 2010, ಬೆಂಗಳೂರು, ದಿನಾಂಕ: 6ನೇ ಏಪ್ರಿಲ್, 2011**

The National Law School of India (Amendment) Bill, 2011 ಇದಕ್ಕೆ, 2011ರ ಏಪ್ರಿಲ್ ಮಾಹೆಯ ಎರಡನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2011ರ ಕರ್ನಾಟಕ ಅಧಿನಿಯಮ ಸಂಖ್ಯೆ:19 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

## KARNATAKA ACT NO 19 OF 2011

(First Published in the Karnataka Gazette Extra-ordinary on the sixth day of April, 2011)

## THE NATIONAL LAW SCHOOL OF INDIA (AMENDMENT) ACT, 2011

(Received the assent of the Governor on the second day of April, 2011)

An Act further to amend the National Law School of India Act, 1986.

Whereas, it is expedient to amend the National Law School of India Act, 1986 (Karnataka Act 22 of 1986) for the purposes hereinafter appearing;

Be it enacted by the Karnataka State Legislature in the sixty first year of the Republic of India as follows.-

**1. Short title and commencement.-** (1) This Act may be called the National Law School of India (Amendment) Act, 2011.

(2) It shall come into force at once.

**2. Amendment of section 2.-** In the National Law School of India Act, 1986 (Karnataka Act 22 of 1986) (hereinafter referred to as the Principal Act), in section 2, for clause (13) the following shall be substituted, namely:-

"(13) "visitor" means the visitor of the school".

**3. Amendment of section 7,-** In section 7 of the principal Act, in sub-section(1) including the proviso, the following shall be substituted, namely:-

" (1) The Chief Justice of India or his nominee who is a sitting Judge of the Supreme Court shall be the visitor of the School."

**4. Substitution of the word "chancellor".-** For the word "chancellor" wherever they occur in the Principal Act, the word "visitor" shall be substituted.

By Order and in the name of the Governor of Karnataka
**G.K. BOREGOWDA**
Secretary to Government,
Department of Parliamentary Affairs and Legislation

# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಬುಧವಾರ, ಏಪ್ರಿಲ್ ೬, ೨೦೧೧ (ಚೈತ್ರ ೧೬, ಶಕ ವರ್ಷ ೧೯೩೩) | ನಂ. ೪೦೨ |
|---|---|---|


**ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 43 ಶಾಸನ 2010, ಬೆಂಗಳೂರು, ದಿನಾಂಕ: 6ನೇ ಏಪ್ರಿಲ್, 2011**

The Karnataka Agricultural Produce Marketing (Regulation and Development) (Amendment) Bill, 2011 ಇದಕ್ಕೆ, 2011ರ ಏಪ್ರಿಲ್ ಮಾಹೆಯ ಎರಡನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2011ರ ಕರ್ನಾಟಕ ಅಧಿನಿಯಮ ಸಂಖ್ಯೆ: 18 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

## KARNATAKA ACT 18 OF 2011

(First Published in the Karnataka Gazette Extra-ordinary on the Sixth day of April, 2011)

## THE KARNATAKA AGRICULTURAL PRODUCE MARKETING (REGULATION AND DEVELOPMENT) (AMENDMENT) ACT, 2011

(Received the assent of the Governor on the Second day of April, 2011)

An Act further to amend the Karnataka Agricultural Produce Marketing (Regulation and Development) Act, 1966.

Whereas it is expedient further to amend the Karnataka Agricultural Produce Marketing (Regulation and Development) Act, 1966 (Karnataka Act 27 of 1966) for the purposes hereinafter appearing;

Be it enacted by the Karnataka State Legislature in the sixty first year of the Republic of India as follows:-

**1. Short title and commencement.**- (1) This Act may be called the Karnataka Agricultural Produce Marketing (Regulation and Development) (Amendment) Act, 2011.

(2) It shall come into force at once.

**2. Amendment of section 65.-** In the Karnataka Agricultural Produce Marketing (Regulation and Development) Act, 1966 (Karnataka Act 27 of 1966), in section 65,-

(1) after sub-section (4), the following shall be inserted, namely:-

"Provided that the existing processing industries who undertake expansion/ modernization/diversification shall also be exempted from payment of market fee, for a period of five years from the date of the commencement of the Karnataka Agricultural Produce Marketing (Regulation and Development)(Amendment) Act, 2011 subject to the following conditions, namely:-

(a) a minimum investment of fifty percent of the earlier investment on fixed assets has to be made;

(b) the increased production compared to the average of the production made in the previous three years qualifies for exemption under expansion programme;

(c) raw material used for production of new product other than existing one will be considered for diversification programme;

(d) the existing units which have replaced all the old machineries with the modern machineries under the modernization programme shall be exempted from payment of market fee on the total raw material purchases for processing capacity only;

(e) a certificate issued by the Director of Industries and commerce, Government of Karnataka or his nominee certifying that he has fulfilled the above conditions and he is eligible for exemption of fee shall be produced."

(2) after sub-section (4), the following shall be inserted, namely:-

"(5) No market fee shall be payable for a period of five years, four years and three years from the date of the commencement of the Karnataka Agricultural Produce Marketing (Regulation and Development) (Amendment) Act, 2011, in case of new agricultural produce processing industries and existing processing industries who undertake

expansion/modernization/ diversification in Zone-1, 2 and 3 respectively as identified under Karnataka New Industrial Policy 2009-2014, published in Government Order No. CI/223/SPI/2008, dated 28.02.2009, on the purchases of agricultural produce as specified in Sl. No.II, III, IV, VI, VII, IX and X of the Schedule appended to the Act directly from farmers, subject to the following conditions, namely:-

(i) A minimum investment of fifty percent of the earlier investment on fixed assets has to be made under expansion/modernization/diversification projects.

(ii) The increased production compared to the average of the production made in the previous three years qualifies for exemption under expansion program.

(iii) Raw material used for production of new product other than the existing one shall be considered for diversification programme.

(iv) The existing units, which have replaced all the old machineries with the modern machineries under the modernization programme shall be exempted from payment of market fee on the total raw material purchases for processing capacity only.

(v) a certificate issued by the Director of Industries and commerce, Government of Karnataka or his nominee certifying that he has fulfilled the above conditions and he is eligible for exemption of fee shall be produced.

By Order and in the name of the Governor of Karnataka

**G.K. BOREGOWDA**
Secretary to Government,
Department of Parliamentary Affairs and Legislation

# ವಿಶೇಷ ಪತ್ರಿಕೆ


| ಭಾಗ – **IV-A** | ಬೆಂಗಳೂರು, ಗುರುವಾರ, ಏಪ್ರಿಲ್ ೭, ೨೦೧೧ (ಚೈತ್ರ ೧೭, ಶಕ ವರ್ಷ ೧೯೩೩) | ನಂ. ೪೦೯ |
|---|---|---|


**ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 25 ಶಾಸನ 2011, ಬೆಂಗಳೂರು, ದಿನಾಂಕ: 7ನೇ ಏಪ್ರಿಲ್, 2011**

The Karnataka Municipal Corporations and certain other Law (Amendment) Bill, 2011 ಇದಕ್ಕೆ, 2011ರ ಏಪ್ರಿಲ್ ಮಾಹೆಯ 02 ನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2011ರ ಕರ್ನಾಟಕ ಅಧಿನಿಯಮ ಸಂಖ್ಯೆ: 24 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

## KARNATAKA ACT NO. 24 OF 2011

(First published in the Karnataka Gazette Extra-ordinary on the seventh day of April, 2011)

## THE KARNATAKA MUNICIPAL CORPORATIONS AND CERTAIN OTHER LAW (AMENDMENT) ACT, 2011

(Received the assent of the Governor on the second day of April, 2011)

An Act further to amend the Karnataka Municipal Corporations Act, 1976 and the Karnataka Municipalities Act, 1964.

Whereas it is expedient further to amend the Karnataka Municipal Corporations Act, 1976 (Karnataka Act 14 of 1977) and the Karnataka Municipalities Act, 1964 (Karnataka Act 22 of 1964) for the purposes hereinafter appearing;

Be it enacted by the Karnataka State Legislature in the Sixty Second year of the Republic of India, as follows:-

**1. Short title and commencement.-** (1) This Act may be called the Karnataka Municipal Corporations and Certain Other Law (Amendment) Act, 2011.

(2) It shall come into force from such date as the State Government may, by notification, appoint, different dates may be appointed for different provisions of this Act.

**2. Amendment of the Karnataka Act 14 of 1977.-** In the Karnataka Municipal Corporations Act, 1976 (Karnataka Act 14 of 1977),-

(i) after Chapter IX, the following shall be inserted, namely:-

**"CHAPTER IX-A**

**Establishment of the Karnataka Property Tax Board**

**102A. Definitions.-** For the purposes of this Chapter, unless the context otherwise requires,-

(a) "Board" means the Karnataka Property Tax Board;

(b) "Fund" means the Karnataka Property Tax Board Fund;

(c) "Municipality" means a municipal corporation established under section 3 of the Karnataka Municipal Corporations Act, 1976 or a city or a town municipal council incorporated under section 10 or a town panchayat constituted under section 351 of the Karnataka Municipalities Act, 1964.

**102B. Act to override other laws.-** Notwithstanding anything contained in any law for the time being inforce, no municipality or corporation shall determine the rate of any zone, area or any nature or class of building for taxation without consultation of the Board.

**102C**. **Establishment of the Board**.- (1) The State Government may, by notification establish, for the purposes of this Chapter, a Board to be called the Karnataka Property Tax Board.

(2) The Board shall be a body corporate with perpetual succession and a common seal and may sue or be sued in its corporate name and shall be competent to acquire, hold and dispose of any property, both movable and immovable, to enter into contracts and to do all things necessary for the purposes of this Act.

(3) The Head quarters of the Board shall be at Bangalore with branches at such other places as it deem necessary.

**102D. Composition of the Board.-** (1) The Board shall consist of a Chairperson and such number of members including ex-officio members not exceeding four as may be appointed by the State Government.

(2) The Chairperson shall be a person who is or has been an officer of the State Government not below the rank of Secretary to Government including ex-officio Secretary:

Provided that not exceeding two members shall be persons having knowledge and experience in the fields of municipal administration, valuation of properties, accountancy, law and urban planning as the State Government may prescribe.

(3) The Chairperson and the members of the Board shall hold office for a period of five years:

Provided that on expiry of the term of the office of Chairperson or member, he shall not be eligible for reappointment as Chairperson or member and for further appointment to any office of profit under the Government of the State or in any corporation, company, society or university by or under the control of the State Government.

(4) The terms and conditions of service, including salaries and allowances of the Chairperson and members of the board, shall be such as may be prescribed by the State Government.

**102E. Validation.-** Notwithstanding anything contained in this Chapter, no action of the Board shall be invalid or otherwise in question merely on the ground of the existence of any vacancy in the office of the members of the Board.

**102F**. **Functions of the Board.-** The Board shall perform the following functions, namely:-

(a) enumerate, or cause to enumerate, all class of properties and rates prevailing in zones or areas in the municipality in the state and develop a data-base;

(b) review the property tax system and suggest suitable basis for capital valuation of properties or the annual taxable value;

(c) design and formulate transparent procedure for determination of capital valuation of properties or annual taxable value;

(d) recommend tax rate for different classes of building or area or zones of the municipalities;

(e) recommend modalities or basis for periodic revision;

(f) shall assist municipalities in determining the rates of any zone, area or any class of building;

(g) ensure transparency in capital valuation process or annual taxable value and facilitate disclosure of the same for fair comparison;

(h) publish the work plan in the state Gazette;

(i) the Board may make recommendations for determining the market value guidelines for the purpose of levying and collecting the property tax based on the market value guidelines as provided under section 45B of the Karnataka Stamp Act, 1957;

(j) the Board may also discharge such other functions in the field of valuation including development expertise in valuation of land and building;

(k) the Board may undertake directly or through any institution, training of officers and employees of the Corporation and Municipalities as the State Government may direct or as the Board may consider it necessary for carrying out the purposes of this Chapter; and

(l) such other functions as may be prescribed.

**102G. Publication of draft valuation rates.-** (1) When the determination of valuation of any class of lands and buildings or of any area or zone in any municipality has been completed, the Board shall cause such draft valuation rates be published in such manner, as may be prescribed and shall specify a date of not less than thirty days within which suggestions to the draft valuation rates may be filed.

(2) After the expiry of the date specified in sub-section (1) and within such period thereafter as may be prescribed, the suggestions on the draft valuation rates shall be considered by the Board.

(3) After considering suggestions if any, the Board shall prepare a final valuation rates and shall recommend the final rates in respect of any area or zone or any class of building to the municipality.

**102H. Appointment of staff**.- (1) The Board may, by regulations make provisions for method of recruitment and conditions of service of the employees of the Board.

(2) Subject to such conditions of service as may be specified by regulations made in this behalf, the Board may appoint a Secretary and such other officers as may be required to enable the Board to carry out its functions under this Act.

**102I. Appointment of staff of municipality or any other local authority.-** The Board may appoint on deputation such number of staff of the municipality or any other local authority as the case may be, on such terms and conditions as may be determined by regulation.

**102J. Funds of the Board.-** (1) The Board shall have a Fund to be called the State Property Tax Board fund to which shall be credited,-

(a) such money as may be paid to the Board by the municipalities and other local authorities under section 102L; and

(b) such money as may be paid to the Board by the State Government or any other authority or agency.

(2) All money received by the Board shall be deposited in one or more nationalized banks as may be prescribed.

**102K. Grants or loans to the Board.-** The State Government may extend grants to the Board on such terms and conditions as the State Government may determine.

**102L. Municipalities to make payment to the Board.-** Subject to the rules made in this behalf, every Municipality or any other local authority, as the case may be shall pay to the Board such proportion of the expenditure as may be prescribed incurred by the Board for performing its functions under section 102F.

**102M. Annual Report.-** The Board shall prepare an annual report of its activities during the year in such form as may be prescribed by the State Government and the Annual Report shall be placed before the Legislature of the State.

**102N. Expenditure incurred on account of salaries and allowances including contingencies.-** (1) The expenditure incurred by the Board for meeting the salaries and allowances including contingencies of the Chairperson, members, Secretary, officers and employees serving under or for the Board shall be defrayed out of the Fund of the Board.

(2) The expenditure towards contingencies for undertaking normal activities of the Board shall be met out of the Fund of the Board.

**102O. Budget.-** (1) The Board shall prepare each year in such form and within such time, as may be prescribed, a budget in respect of the ensuing financial year, showing the estimated receipts and expenditure and shall forward a copy of the same to State Government for approval.

(2) The State Government may accord such approval and make such additions, alterations, and modifications thereon as it thinks fit.

**102P. Expenditure and accounts.-** (1) The Board shall have the same financial powers as are exercisable by the Secretary of a department of the State Government. Matters beyond such financial year powers shall be referred by the Board to the State Government for decision.

(2) The Board shall keep accounts of all receipts and expenditure and prepare annual account, in a regular manner as per standard accounting norms or in such manner as may be prescribed.

**102Q. Audit.-** (1) The Board shall cause its accounts to be audited annually, by an auditor to be appointed by the State Government and the auditor so appointed shall have the right to demand the production of books, documents and other papers of the Board.

(2) The annual accounts prepared under sub-section (2) of section 102P shall be placed to the auditor for audit. As soon as the accounts have been audited, the Board shall send a copy thereof together with a copy of the report of the auditor to the State Government.

(3) The Board shall comply with such directions as the State Government may, after perusal of the report of the auditor, think fit to issue in this behalf.

(4) The Board shall pay out of the fund such sum as may be determined by the State Government by way of fees if any for such audit.

**102R. Delegation of powers.-** (1) Subject to the rules made by the State Government, the Board may delegate any of its powers and functions including financial powers to the Chairperson of the Board except the power to make rules.

(2) The Board may also delegate any of its powers and functions to any other officers of the Board by a resolution adopted by it in this behalf.

**102S. Member, officers and employees to be public servants.**- Every member of the Board or every officer or employee of the Board shall, when acting or purporting to act under the provisions of this Act, be deemed to be a public servant within the meaning of section 21 of the Indian Penal Code (Act No. 45 of 1860).

**102T. Secretary to carry on correspondence.-** The State Government may appoint an officer not below the rank of Group A Senior to be the Secretary of the Board who shall be the Chief Executive of the Board. All correspondence relating to any matter dealt with, by or under this Act or under any other law between the Board and the Government or other authority shall be conducted by the Secretary and the Secretary shall send copies of such correspondence to the Chairperson of the Board. The Secretary shall sue and be sued on behalf of the Board.

**102U. Custody of records.-** The Secretary shall be responsible for the custody of all records of the Board including all papers and documents connected with the proceedings of the Board.

**102V. Control over the Board establishment.-** Subject to the provisions of this Chapter and rules and regulations made thereunder, the Secretary shall specify the duties of persons borne on the Board and exercise powers of supervision and control over them and decide all questions relating to their conditions of service.

**102W. Notice to be given of suits**.- (1) No suit shall be instituted against the Board or against any officer or servant of the Board or against any person acting under the order or direction of the Board or any officer or other servant, in respect of any act done, or purporting to have been done in pursuance of this Act or any rule or regulation made thereunder, until the expiration of two months after notice in writing has been left at the office of the Board and, in the case of such officer, servant or person, unless notice in writing has also been delivered to him or left at his office or place of residence, and unless such notice states explicitly the cause of action, the nature of the relief sought, the amount of compensation claimed and the name and place of residence of the intending plaintiff and unless the plaint contains a statement that such notice has been so left or delivered.

(2) Nothing in sub-section (1) shall be deemed to apply to a suit in which the only relief claimed is an injunction of which the object would be defeated by giving of the notice or the postponement of institution of the suit.

**102X. Power of the Government to make rules.-** (1) The Government may, after previous publication, by notification, make rules to carry out the purposes of this Chapter:

Provided that no previous publication shall be necessary for any rule made for the first time after the commencement of this Chapter.

(2) In particular and without prejudice to the generality of the foregoing power such rules may provide for,-

(a) all matters expressly required and allowed in this Chapter or any other law to be prescribed;

(b) conduct of business of the meetings and inspections of the Board;

(c) regulate or prohibit the moving of any resolution or making or any motions on or the discussion of any matter unconnected with the municipal administration;

(d) prescribe the accounts to be kept by the Board, the manner in which such accounts shall be audited and published;

(e) prescribe the forms of all registers, reports and returns, the manner in which such registers shall be maintained, the dates on which the reports and returns shall be made and the officers to whom they shall be sent, as also of warrants and notices of sale.

**102Y. Removal of difficulties.-** (1) Notwithstanding anything contained in this Chapter or in any other law, the Government may, by notification, published in the official Gazette, make such provision not inconsistent with the provisions of this Act as appears to it to be necessary and expedient,-

(a) for making omissions from, additions and to adaptations and modifications of regulations, notifications and orders in their application to the Board;

(b) for removing difficulties arising in connection with the transition to the provisions of this Chapter.**"**

(ii) in section 150, after sub-section (2), the following shall be inserted, namely:-

"(2A) Subject to provisions of any law for the time being in force expenditure in each Municipal Corporation in a year in the State shall be subjected to technical guidance and supervision by the Comptroller and Auditor General of India through complementary audit and submission of Annual Technical and Inspection Report.

(2B) The Controller, State Accounts Department shall send Annual Report of the State Accounts Department pertaining to municipal authorities of the Bruhat Bangalore Mahanagara Palike submitted by the Chief Auditor to the State Government for being placed before the Legislature.

(2C) The Controller, State Accounts Department shall send Annual Report of the State Accounts Department pertaining to all municipal corporations other than the Bruhat Bangalore Mahanagara Palike to the Director of Municipal Administration appointed under the provisions of the Karnataka Municipalities Act, 1964 who shall in turn submit such report to the Government for placing it before the State Legislature.

(2D) The Comptroller and Auditor General of India shall submit the Annual Technical and Inspection Report under sub-section (2A),-

(i) in the case of the Bruhat Bangalore Mahanagara Palike to the State Government for placing it before the State Legislature;

(ii) in the case of Municipal Corporations other than the Bruhat Bangalore Mahanagara Palike to the Director of Municipal Administration who shall in turn submit such report to the Government for placing it before the State Legislature."

**3. Amendment of the Karnataka Act 22 of 1964.-** In the Karnataka Municipalities Act, 1964 (Karnataka Act 22 of 1964),-

(i) after section 101, the following shall be inserted, namely:-

"**101A. Application of provisions.-** (1) The provisions of Chapter IX-A of the Karnataka Municipal Corporations Act, 1976 shall mutatis mutandis apply to the municipalities established under this Act and the Karnataka Property Tax Board established under section 102D of the said Act shall be deemed to be the Property Tax Board for the purpose of this Act and the said Board shall have jurisdiction over the municipalities established under this Act.

(2) No municipality or any officer of the municipality shall determine the valuation of any zone, area or any nature or class of building without consulting the Karnataka Property Tax Board. "

(ii) in section 290, after sub-section (1), the following proviso shall be inserted, namely:-

"Provided that subject to any other law for the time being in force, expenditure in a municipality in a year shall be subjected to technical guidance and supervision by the Comptroller and Auditor General of India through complementary audit and submission of Annual Technical and Inspection Report."

(iii) in section 295, after sub-section (5), the following shall be inserted, namely:-

"(6) The Controller, State Accounts Department shall send Annual Report of the State Accounts Department pertaining to all the municipal councils to the Directorate of Municipal

Administration who shall in turn submit such report to the Government for placing it before the State Legislature.

(7) The Comptroller and Auditor General of India shall submit the Annual Technical and Inspection Report under sub-section (1) of section 290 to the Director of Municipal Administration who shall in turn submit such report to the Government for placing it before the State Legislature."

(iv) after section 388, the following section shall be inserted, namely:-

"**388A. Direction and control.-** (1) without prejudice to any of the provisions of this Act and notwithstanding anything contained in any other law for the time being in force, the State Government or as the case may be the Director of Municipal Administration shall require,-

(a) all City Municipal Councils, Town Municipal Councils and Town Panchayats and all its officers;

(b) all Municipal Corporations other than Bruhat Bangalore Mahanagara Palike established under the Karnataka Municipal Corporations Act, 1976 and all its officers,-

(i) to produce any record, correspondence or other documents;

(ii) to furnish any return, plan, estimate, accounts or statistics; and

(iii) to furnish or obtain any report;

and thereupon such City Municipal Council, town Municipal Council, town Panchayat or as the case may be Municipal Corporation shall comply with such requirement.

(3) The Director of Municipal Administration or as the case may be the State Government may depute any of its officers to inspect or examine any department, office, service, work or property of the City Municipal Council, Town Municipal Council, Town Panchayat or as the case may be the Municipal Corporation and to report thereon and such officer may, for the purpose of such inspection or examination, exercise all the powers of the State Government or the Director of Municipal Administration."

By Order and in the name of the Governor of Karnataka

**G.K. BOREGOWDA**
Secretary to Government,
Department of Parliamentary Affairs and Legislation

# ವಿಶೇಷ ಪತ್ರಿಕೆ

| | | |
|---|---|---|
| ಭಾಗ – **IV-A** | ಬೆಂಗಳೂರು, ಗುರುವಾರ, ಏಪ್ರಿಲ್ ೭, ೨೦೧೧ (ಚೈತ್ರ ೧೭, ಶಕ ವರ್ಷ ೧೯೩೩) | ನಂ. ೪೧೦ |

**ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 40 ಶಾಸನ 2002, ಬೆಂಗಳೂರು, ದಿನಾಂಕ: 7ನೇ ಏಪ್ರಿಲ್, 2011**

The Karnataka Ground Water (Regulation and Control of Development and Management) Bill, 2011 **–** ಇದಕ್ಕೆ 2011ರ ಏಪ್ರಿಲ್ ತಿಂಗಳ ಐದನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2011ರ ಕರ್ನಾಟಕ ಅಧಿನಿಯಮ ಸಂಖ್ಯೆ:25 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**2011ರ ಕರ್ನಾಟಕ ಅಧಿನಿಯಮ ಸಂಖ್ಯೆ 25**

(2011ರ ಏಪ್ರಿಲ್ ಏಳನೇ ದಿನಾಂಕದಂದು ಕರ್ನಾಟಕ ರಾಜ್ಯಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)

# ಕರ್ನಾಟಕ ಅಂತರ್ಜಲ (ಅಭಿವೃದ್ಧಿ ಮತ್ತು ನಿರ್ವಹಣೆಯ ವಿನಿಯಮನ ಹಾಗೂ ನಿಯಂತ್ರಣ) ಅಧಿನಿಯಮ, 2011

(2011ರ ಏಪ್ರಿಲ್ ಐದನೇ ದಿನಾಂಕದಂದು ರಾಜ್ಯಪಾಲರ ಅನುಮತಿಯನ್ನು ಪಡೆಯಲಾಗಿದೆ)

ಅಂತರ್ಜಲದ ಅಭಿವೃದ್ಧಿ ಮತ್ತು ನಿರ್ವಹಣೆಯ ವಿನಿಯಮನ ಮತ್ತು ನಿಯಂತ್ರಣಕ್ಕಾಗಿ ಮತ್ತು ಅದಕ್ಕೆ ಸಂಬಂಧಿಸಿದ ಅಥವಾ ಅದಕ್ಕೆ ಪ್ರಾಸಂಗಿಕವಾದ ವಿಷಯಗಳಿಗಾಗಿ ಉಪಬಂಧ ಕಲ್ಪಿಸಲು ಒಂದು ಅಧಿನಿಯಮ.

ರಾಜ್ಯದಲ್ಲಿ ಅಂತರ್ಜಲದ ಅಭಿವೃದ್ಧಿ ಮತ್ತು ನಿರ್ವಹಣೆಯ ವಿನಿಯಮನ ಹಾಗೂ ನಿಯಂತ್ರಣಕ್ಕಾಗಿ ಮತ್ತು ಅದಕ್ಕೆ ಸಂಬಂಧಿಸಿದ ಅಥವಾ ಅದಕ್ಕೆ ಪ್ರಾಸಂಗಿಕವಾದ ವಿಷಯಗಳಿಗಾಗಿ ಉಪಬಂಧ ಕಲ್ಪಿಸುವುದು ಯುಕ್ತವಾಗಿರುವುದರಿಂದ;

ಇದು, ಭಾರತ ಗಣರಾಜ್ಯದ ಅರವತ್ತೆರಡನೆಯ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ :–

## ಅಧ್ಯಾಯ – I

## ಪ್ರಾರಂಭಿಕ

**1. ಸಂಕ್ಷಿಪ್ತ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ ಹಾಗೂ ಅನ್ವಯ.**– (1) ಈ ಅಧಿನಿಯಮವನ್ನು **ಕರ್ನಾಟಕ ಅಂತರ್ಜಲ (ಅಭಿವೃದ್ಧಿ ಮತ್ತು ನಿರ್ವಹಣೆಯ ವಿನಿಯಮನ ಹಾಗೂ ನಿಯಂತ್ರಣ) ಅಧಿನಿಯಮ, 2011** ಎಂದು ಕರೆಯತಕ್ಕದ್ದು.

(2) ಇದು ಇಡೀ ಕರ್ನಾಟಕ ರಾಜ್ಯಕ್ಕೆ ವ್ಯಾಪ್ತವಾಗುವುದು.

(3) ಇದು ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದಂಥ ದಿನಾಂಕದಿಂದ ಜಾರಿಗೆ ಬರತಕ್ಕದ್ದು ಮತ್ತು ಬೇರೆ ಬೇರೆ ಪ್ರದೇಶಗಳಿಗೆ ಹಾಗೂ ಈ ಅಧಿನಿಯಮದ ಬೇರೆ ಬೇರೆ ಉಪಬಂಧಗಳಿಗೆ ಬೇರೆ ಬೇರೆ ದಿನಾಂಕಗಳನ್ನು ಗೊತ್ತುಪಡಿಸಬಹುದು.

(4) ಈ ಅಧಿನಿಯಮದ ಉಪಬಂಧಗಳು, ಕುಡಿಯುವ ನೀರಿನ ಸಾರ್ವಜನಿಕ ಮೂಲಗಳ ಸಂರಕ್ಷಣೆಗಾಗಿ ಅಂತರ್ಜಲ ತೆಗೆಯುವುದನ್ನು ನಿಯಂತ್ರಿಸುವ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನ ಉಪಬಂಧಗಳ ಜೊತೆಗೆ ಹೆಚ್ಚುವರಿಯಾಗಿರತಕ್ಕದ್ದು ಮತ್ತು ಅವುಗಳ ಮಹತ್ವವನ್ನು ಕಡಿಮೆ ಮಾಡತಕ್ಕದ್ದಲ್ಲ.

**2. ಪರಿಭಾಷೆಗಳು.**– ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) **"ಅಂತರ್ಜಲದ ಕೃತಕ ಮರುಪೂರಣ"** ಎಂದರೆ, ನೈಸರ್ಗಿಕ ಪರಿಸ್ಥಿತಿಗಳಲ್ಲಿ ನೀರು ಮತ್ತೆ ಕೂಡಿಕೊಳ್ಳುತ್ತಿದ್ದ ಪ್ರಮಾಣಕ್ಕಿಂತಲೂ ಹೆಚ್ಚಿಗೆಯಾಗಿ ಅಂತರ್ಜಲ ರಾಶಿಯು ಹೆಚ್ಚುವಂತೆ ಮಾಡುವ ಕಾರ್ಯವಿಧಾನ;

(ಬಿ) **"ಪ್ರಾಧಿಕಾರ"** ಎಂದರೆ, 3ನೇ ಪ್ರಕರಣದ ಅಡಿಯಲ್ಲಿ ರಚಿಸಲಾದ ಕರ್ನಾಟಕ ಅಂತರ್ಜಲ ಪ್ರಾಧಿಕಾರ;

(ಸಿ) **"ಉಲ್ಲಂಘನೆ"** ಎಂದರೆ, ಒಂದು ನಿಯಮದ, ಕಾನೂನಿನ ಅಥವಾ ನ್ಯಾಯಿಕ ಆದೇಶದ ಅತಿಕ್ರಮಣ ಅಥವಾ ಉಲ್ಲಂಘನೆ ಅಥವಾ ನಿಯಂತ್ರಕ ಅಗತ್ಯತೆಗಳ ಉಲ್ಲಂಘನೆ ಅಥವಾ ಹೊಣೆ, ವಚನ ಅಥವಾ ಒಪ್ಪಂದವನ್ನು ನೆರವೇರಿಸದಿರುವುದು.

(ಡಿ) ಬಾವಿಗೆ ಸಂಬಂಧಿಸಿದಂತೆ **'ತೋಡುವುದು/ಕೊರೆಯುವುದು'** ಎಂದರೆ, ಎಲ್ಲಾ ವ್ಯಾಕರಣ ವ್ಯತ್ಯಾಸಗಳೊಂದಿಗೆ ಮತ್ತು ಸಂವಾದಿ ಪದಾವಳಿಗಳೊಂದಿಗೆ, ಹೊಸ ಬಾವಿಗಳನ್ನು ತೋಡುವುದು, ಕೊರೆಯುವುದು ಅಥವಾ ಕೊಳವೆ ಬಾವಿಗಳನ್ನು ಅಥವಾ ಈಗ ಇರುವ ಬಾವಿಗಳಲ್ಲಿ ಕೊರೆಯುವುದು ಒಳಗೊಂಡಂತೆ ಅಂತರ್ಜಲವನ್ನು ಹೊರತೆಗೆಯುವುದಕ್ಕಾಗಿ ಈಗ ಇರುವ ಬಾವಿಗಳನ್ನು ಆಳ ಮಾಡುವುದು ಮತ್ತು (ಸುತ್ತಳತೆ ಮತ್ತು ಗ್ಯಾಲರಿ) ಮಾರ್ಪಡಿಸುವುದು.

(ಇ) **"ಕೊರೆಯುವ ಏಜೆನ್ಸಿ"** ಎಂದರೆ, ಜಲಮೂಲಗಳ ಶೋಧನೆಗಾಗಿ ಅಥವಾ ನೀರನ್ನು ಹೊರತೆಗೆಯುವುದಕ್ಕಾಗಿ ಬಾವಿಯನ್ನು ಕೊರೆಯುವ ಅಥವಾ ತೋಡುವ ಕಾರ್ಯದಲ್ಲಿ ನಿರತವಾದ ಒಬ್ಬ ವ್ಯಕ್ತಿ ಅಥವಾ ಒಂದು ಏಜೆನ್ಸಿ ಅಥವಾ ಒಂದು ಸಂಘ ಅಥವಾ ಒಂದು ಸಂಸ್ಥೆ;

(ಎಫ್) **'ನಿಷ್ಕ್ರಿಯ ಬಾವಿ'** ಎಂದರೆ ಇನ್ನು ಮುಂದೆ ನೀರು ದೊರೆಯದಿರುವ ಅಥವಾ ಬಳಕೆಯಲ್ಲಿಲ್ಲದ ತೆರೆದ ಬಾವಿಗಳು ಅಥವಾ ಕೊಳವೆ ಬಾವಿಗಳು.

(ಜಿ) **'ವಿಫಲವಾದ ಕೊಳವೆ ಬಾವಿಗಳು'** ಎಂದರೆ, ಅಳವಡಿಸುವ ಸಮಯದಲ್ಲಿ ಪ್ರತಿ ಸೆಕೆಂಡಿಗೆ ಒಂದು ಲೀಟರಿಗಿಂತ ಕಡಿಮೆ (ಅಥವಾ 791 ಗ್ಯಾಲನ್ ಪರ್ ಅವರ್) ನೀರು ದೊರೆಯುತ್ತಿರುವ ಕೊಳವೆ ಬಾವಿ.

(ಎಚ್) **"ಸರ್ಕಾರ"** ಎಂದರೆ, ರಾಜ್ಯ ಸರ್ಕಾರ;

(ಐ) **"ಅಂತರ್ಜಲ"** ಎಂದರೆ, ಭೂಮಿಯ ಮೇಲ್ಮೈಗಿಂತಲೂ ಕೆಳಗೆ ಒಂದು ಪರ್ಯಾಪ್ತತಾ ವಲಯದಲ್ಲಿರುವಂಥ ಹಾಗೂ ಬಾವಿ ಅಥವಾ ಇನ್ನಾವುದೇ ವಿಧಾನದಿಂದ ಹೊರಕ್ಕೆ ತೆಗೆಯಬಹುದಾದಂಥ ಇಲ್ಲವೇ ಚಿಲುಮೆ ರೂಪದಲ್ಲಿ ಮತ್ತು ತೊರೆಗಳ, ನದಿಗಳ ಮೂಲಒರತೆಯ ರೂಪದಲ್ಲಿ ಹೊರಹೊಮ್ಮುವ ಜಲ;

(ಜೆ) **'ಕೆಳದರ್ಜೆಯ ಗುಣಮಟ್ಟದ ಕೆಲಸ'** ಎಂದರೆ, ಬಾವಿಯ ನಿರ್ವಹಣೆಗೆ ಬಾಧಕವಾಗುವ ನಕ್ಷೆ ತಯಾರಿಕೆಯ ಹಂತದಲ್ಲಿ ಕಂಡುಬರುವ ದೋಷಗಳು ಮತ್ತು ತಪ್ಪುಗಳು.

(ಕೆ) **"ಸ್ಥಳೀಯ ಪ್ರಾಧಿಕಾರ"** ಎಂದರೆ, ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಅಡಿಯಲ್ಲಿ ರಚಿತವಾದ, ಒಂದು ನಗರಪಾಲಿಕೆ, ಪುರಸಭೆ, ಪಟ್ಟಣ ಪಂಚಾಯಿತಿ, ಜಿಲ್ಲಾ ಪಂಚಾಯಿತಿ, ತಾಲ್ಲೂಕು ಪಂಚಾಯಿತಿ, ಗ್ರಾಮ ಪಂಚಾಯಿತಿ, ಕೈಗಾರಿಕಾ ಉಪನಗರ ಪ್ರಾಧಿಕಾರ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಅಭಿವೃದ್ಧಿ ಮಂಡಳಿ, ನಗರಾಭಿವೃದ್ಧಿ ಪ್ರಾಧಿಕಾರ, ಯೋಜನಾ ಪ್ರಾಧಿಕಾರ, ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ;

(ಎಲ್) **"ಅಧಿಸೂಚಿತ ಪ್ರದೇಶ"** ಎಂದರೆ, 10ನೇ ಪ್ರಕರಣದಡಿ ಅಧಿಸೂಚಿತವಾದ ಪ್ರದೇಶ;

(ಎಂ) **"ಅನುಮತಿ ಪತ್ರ"** (ಪರ್ಮಿಟ್) ಎಂದರೆ, 11ನೇ ಪ್ರಕರಣದ ಅಡಿ ಮಂಜೂರಾದ ಅನುಮತಿ ಪತ್ರ;

(ಎನ್) **"ಮಳೆ ನೀರಿನ ಕೊಯ್ಲು"** ಎಂದರೆ, ಭೂ ಮೇಲ್ಮೈಯಲ್ಲಿ ಅಥವಾ ಭೂಮಿಯ ಒಳಗೆ ಪ್ರಾಕೃತಿಕ ಜಲಬಂಡಾರಗಳಲ್ಲಿ ಮಳೆ ನೀರನ್ನು ಸಂಗ್ರಹಿಸುವುದು ಮತ್ತು ಬಳಸುವ ವಿಧಾನ;

(ಒ) **"ನೋಂದಣಿ"** ಎಂದರೆ, 12ನೇ ಪ್ರಕರಣ ಮತ್ತು 13ನೇ ಪ್ರಕರಣದಡಿ ಮಂಜೂರಾದ ನೋಂದಣಿ ಪ್ರಮಾಣಪತ್ರ;

(ಪಿ) **"ಅಂತರ್ಜಲದ ಬಳಕೆದಾರ"** ಎಂದರೆ, ವ್ಯಕ್ತಿಗತವಾಗಿ ಅಥವಾ ಇಡಿ ಸಮುದಾಯಕ್ಕಾಗಿ ಗೃಹಬಳಕೆಯನ್ನೊಳಗೊಂಡಂತೆ, ಯಾವುದೇ ಉದ್ದೇಶಕ್ಕಾಗಿ ಅಂತರ್ಜಲ ತೆಗೆಯುವ ಅಥವಾ ಬಳಸುವ ಅಥವಾ ಮಾರಾಟ ಮಾಡುವ ಯಾವೊಬ್ಬ ವ್ಯಕ್ತಿ ಅಥವಾ ವ್ಯಕ್ತಿಗಳ ಗುಂಪು ಅಥವಾ ಸರ್ಕಾರದ ಅಥವಾ ಸರ್ಕಾರದ್ದಲ್ಲದ ಒಂದು ಕಂಪನಿ ಅಥವಾ ಉದ್ಯಮ ಸಂಸ್ಥೆಯು ಸೇರಿದಂತೆ ಒಂದು ಸಂಸ್ಥೆ;

(ಕ್ಯೂ) **"ಬಾವಿ"** ಎಂದರೆ, ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರದ ಪ್ರಾಧಿಕೃತ ಅಧಿಕಾರಿಗಳು, ಅಂತರ್ಜಲದ ವೈಜ್ಞಾನಿಕ ಶೋಧನೆ, ಪರಿಶೋಧನೆ, ಅಭಿವೃದ್ಧಿ, ಪ್ರವರ್ಧನೆ, ಸಂರಕ್ಷಣೆ, ರಕ್ಷಣೆ ಅಥವಾ ನಿರ್ವಹಣೆಗಾಗಿ ತೆಗೆದಿದ್ದನ್ನು ಹೊರತುಪಡಿಸಿ, ವ್ಯಕ್ತಿ ಅಥವಾ ವ್ಯಕ್ತಿಗಳು ಕುಡಿಯುವುದಕ್ಕೆ/ಗೃಹಕೃತ್ಯಕ್ಕೆ/ಕೈಗಾರಿಕಾ/ವಾಣಿಜ್ಯ/ಕೃಷಿ ಬಳಕೆಗಾಗಿ ಅಂತರ್ಜಲ ಶೋಧನೆಗೆ ಅಥವಾ ತೆಗೆದು ಬಳಸುವ ಒಂದು ನಿರ್ಮಿತಿ ಮತ್ತು ಇದು ತೆರೆದ ಬಾವಿ, ಕೊರೆ ಬಾವಿ, ತೋಡಿದ ಮತ್ತು ಕೊರೆ ಬಾವಿ, ಕೊಳವೆ ಬಾವಿ, ಶೋಧಿಸುವ ಸ್ಥಳ, ಸಂಗ್ರಹ ಬಾವಿ ನೀರು ಒಳಗೂಡಿಸುವ ಕವಲು, ಮರುಪೂರಣ ಬಾವಿ, ವಿಲೆ ಬಾವಿ ಅಥವಾ ಅವುಗಳ ಯಾವುದೇ ಸಂಯೋಜನೆಗಳು ಅಥವಾ ವೈವಿಧ್ಯಗಳನ್ನು ಒಳಗೊಳ್ಳುತ್ತದೆ.

(ಆರ್) **'ಸಂತೃಪ್ತ ವಲಯ'** ಎಂದರೆ, ಭೂಮಟ್ಟದಿಂದ ಕೆಳಗಿರುವ ಸಣ್ಣ ರಂದ್ರಗಳಲ್ಲಿ ಅಥವಾ ಭೌತಿಕ ಪ್ರದೇಶವು ಬಾವಿ ನೀರಿನ ರೂಪದಲ್ಲಿರುವ ಅಂತರ್ಜಲದಿಂದ ತುಂಬಿರುವ ಭೂವಲಯ ಮೇಲ್ಮೈ.

## ಅಧ್ಯಾಯ – II

## ಪ್ರಾಧಿಕಾರದ ರಚನೆ

**3. ಅಂತರ್ಜಲ ಪ್ರಾಧಿಕಾರದ ರಚನೆ.–** (1) ಈ ಅಧಿನಿಯಮದ ಪ್ರಾರಂಭದ ದಿನಾಂಕದ ತರುವಾಯ, ಆದಷ್ಟು ಬೇಗನೆ, ಸರ್ಕಾರವು, ಅಧಿಸೂಚನೆಯ ಮೂಲಕ, ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದ ದಿನಾಂಕದಿಂದ ಜಾರಿಗೆ ಬರುವಂತೆ ಇಡೀ ಕರ್ನಾಟಕ ರಾಜ್ಯಕ್ಕೆ, ಬೆಂಗಳೂರಿನಲ್ಲಿ ಕೇಂದ್ರ ಕಛೇರಿಯನ್ನು ಹೊಂದಿರುವ ಕರ್ನಾಟಕ ಅಂತರ್ಜಲ ಪ್ರಾಧಿಕಾರ ಎಂದು ಕರೆಯಲಾಗುವ ಒಂದು ಪ್ರಾಧಿಕಾರವನ್ನು ರಚಿಸತಕ್ಕದ್ದು.

(2) ಪ್ರಾಧಿಕಾರವು, ಚರ ಮತ್ತು ಸ್ಥಿರ ಸ್ವತ್ತುಗಳೆರಡನ್ನು ಈ ಅಧಿನಿಯಮದ ಉಪಬಂಧಗಳಿಗೊಳಪಟ್ಟು ಆರ್ಜಿಸುವ, ಧಾರಣ ಮಾಡುವ ಮತ್ತು ವಿಲೆ ಮಾಡುವ ಮತ್ತು ಕರಾರು ಮಾಡಿಕೊಳ್ಳುವ ಮತ್ತು ಸದರಿ ಹೆಸರಿನಿಂದ ದಾವೆ ಹೂಡುವ ಅಥವಾ ದಾವೆಗೆ ಗುರಿಯಾಗುವ ಅಧಿಕಾರವಿರುವ ನಿರಂತರ ಉತ್ತರಾಧಿಕಾರಿಯನ್ನು ಮತ್ತು ಸಾಮಾನ್ಯ ಮೊಹರನ್ನು ಹೊಂದಿದ್ದು ಮೇಲೆ ಹೇಳಿದ ಹೆಸರಿನ ಒಂದು ನಿಗಮಿತ ನಿಕಾಯವಾಗಿರತಕ್ಕದ್ದು.

(3) ಪ್ರಾಧಿಕಾರವು ಈ ಮುಂದಿನ ಸದಸ್ಯರುಗಳನ್ನು ಹೊಂದಿರತಕ್ಕದು, ಎಂದರೆ:–

(ಎ) ಸರ್ಕಾರದ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ, ಸಣ್ಣ ನೀರಾವರಿ, ಕರ್ನಾಟಕ ಸರ್ಕಾರ, ಇವರು ಅಧ್ಯಕ್ಷರಾಗಿರತಕ್ಕದ್ದು;

(ಬಿ) ಖನಿಜ ಮತ್ತು ಭೂವಿಜ್ಞಾನ ಆಯುಕ್ತರು ಅಥವಾ ನಿರ್ದೇಶಕರು, ಇವರು ಸದಸ್ಯ ಕಾರ್ಯದರ್ಶಿಯಾಗಿರತಕ್ಕದ್ದು;

(ಸಿ) ಕರ್ನಾಟಕ ಸರ್ಕಾರದ ಆರ್ಥಿಕ ಇಲಾಖೆಯ ಒಬ್ಬರು ಪ್ರತಿನಿಧಿ;

(ಡಿ) ಪ್ರಾದೇಶಿಕ ನಿರ್ದೇಶಕರು, ಕೇಂದ್ರ ಅಂತರ್ಜಲ ಮಂಡಳಿ, ಭಾರತ ಸರ್ಕಾರ;

(ಇ) ಪ್ರದೇಶದ ಮೇಲೆ ಅಧಿಕಾರ ವ್ಯಾಪ್ತಿಯುಳ್ಳ ವಿದ್ಯುತ್ ಸರಬರಾಜು ಕಂಪನಿಯ ಚೀಫ್ ಇಂಜಿನಿಯರ್ ದರ್ಜೆಗಿಂತ ಕಡಿಮೆಯಲ್ಲದ ಒಬ್ಬ ಪ್ರತಿನಿಧಿ;

(ಎಫ್) ಚೀಫ್ ಇಂಜಿನಿಯರ್, ಆರ್‌ಡಿಇಡಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ;

(ಜಿ) ಇಂಜಿನಿಯರ್ ಇನ್ ಚೀಫ್, ಜಲಸಂಪನ್ಮೂಲ ಇಲಾಖೆಯ ಜಲಸಂಪನ್ಮೂಲಗಳ ಅಭಿವೃದ್ಧಿ ಸಂಸ್ಥೆ;

(ಎಚ್) ರಾಜ್ಯ ಸರ್ಕಾರವು ನಾಮನಿರ್ದೇಶಿಸುವ ಚೀಫ್ ಇಂಜಿನಿಯರ್, ಸಣ್ಣ ನೀರಾವರಿ ;

(ಐ) ಅಧ್ಯಕ್ಷರು, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಲಿ;

(ಜೆ) ಕೃಷಿ ಆಯುಕ್ತರು / ನಿರ್ದೇಶಕರು, ಕೃಷಿ ಇಲಾಖೆ;

(ಕೆ) ಮುಖ್ಯ ಮಹಾ ಪ್ರಬಂಧಕ, ರಾಷ್ಟ್ರೀಯ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್, ಬೆಂಗಳೂರು;

(ಎಲ್) ರಾಜ್ಯ ಸರ್ಕಾರವು ನಾಮನಿರ್ದೇಶಿಸುವ ನಾಲ್ಕು ಜನ ರೈತ ಪ್ರತಿನಿಧಿಗಳು;

(ಎಂ) ಚೀಫ್ ಇಂಜಿನಿಯರ್, ಕರ್ನಾಟಕ ನಗರ ನೀರು ಸರಬರಾಜು ಮತ್ತು ಅಭಿವೃದ್ಧಿ ಮಂಡಳಿ;

(ಎನ್) ಚೀಫ್ ಇಂಜಿನಿಯರ್, ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ;

(ಒ) ಸರ್ಕಾರವು ನಾಮನಿರ್ದೇಶಿಸುವ ಅಂತರ್ಜಲ ಸಂಬಂಧದ ವಿಷಯಗಳಲ್ಲಿ ವಿಶೇಷ ತಿಳುವಳಿಕೆ ಅಥವಾ ಪ್ರಾಯೋಗಿಕ ಅನುಭವ ಹೊಂದಿರುವ ಇಬ್ಬರು ಸದಸ್ಯರುಗಳು.

4. **ಪ್ರಾಧಿಕಾರದ ಸದಸ್ಯರ ಅನರ್ಹತೆ.–** (1) ಯಾವೊಬ್ಬ ವ್ಯಕ್ತಿಯು.–

(ಎ) ನೈತಿಕ ಅಧಃಪತನವನ್ನು ಒಳಗೊಳ್ಳುತ್ತದೆಂದು ಸರ್ಕಾರವು ಅಭಿಪ್ರಾಯಪಡುವ ಒಂದು ಅಪರಾಧಕ್ಕಾಗಿ ಸಿದ್ಧದೋಷಿಯಾಗಿದ್ದು, ಕಾರಾವಾಸ ಶಿಕ್ಷೆಗೆ ಒಳಗಾಗಿದ್ದರೆ, ಅಥವಾ

(ಬಿ) ಅಸ್ವಸ್ಥ ಚಿತ್ತದವನಾಗಿದ್ದು, ಸಕ್ಷಮ ನ್ಯಾಯಾಲಯದಿಂದ ಹಾಗೆಂದು ಘೋಷಿತನಾಗಿದ್ದರೆ; ಅಥವಾ

(ಸಿ) ಅನುನ್ಮುಕ್ತ ದಿವಾಳಿಯಾಗಿದ್ದರೆ; ಅಥವಾ

(ಡಿ) ಕೇಂದ್ರ ಸರ್ಕಾರ ಅಥವಾ ಸರ್ಕಾರದ ಸೇವೆಯಿಂದ ಅಥವಾ ಕೇಂದ್ರ ಸರ್ಕಾರ ಅಥವಾ ಸರ್ಕಾರದ ಒಡೆತನದಲ್ಲಿರುವ ಅಥವಾ ನಿಯಂತ್ರಣದಲ್ಲಿರುವ ಒಂದು ನಿಗಮದ ಸೇವೆಯಿಂದ ತೆಗೆದುಹಾಕಲಾಗಿದ್ದರೆ ಅಥವಾ ಅನರ್ಹಗೊಳಿಸಿದ್ದರೆ; ಅಥವಾ

(ಇ) ಪ್ರಾಧಿಕಾರದ ಆದೇಶಾನುಸಾರ ಮಾಡಲಾದ ಯಾವುದೇ ಕೆಲಸದಲ್ಲಿ ಅಥವಾ ಪ್ರಾಧಿಕಾರದೊಡನೆ ಅಥವಾ ಪ್ರಾಧಿಕಾರದ ಅಡಿಯಲ್ಲಿ ಅಥವಾ ಪ್ರಾಧಿಕಾರದ ಮೂಲಕ ಅಥವಾ ಪ್ರಾಧಿಕಾರದ ಪರವಾಗಿ ಆದ ಯಾವುದೇ ಕರಾರು ಅಥವಾ ಉದ್ಯೋಗದಲ್ಲಿ ತಾನೇ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಅಥವಾ ತನ್ನ ಪಾಲುದಾರನ ಮೂಲಕ ಯಾವುದೇ ಷೇರು ಅಥವಾ ಹಿತಾಸಕ್ತಿಯನ್ನು ಹೊಂದಿದ್ದರೆ; ಅಥವಾ

(ಎಫ್) ಪ್ರಾಧಿಕಾರದ ಪರವಾಗಿ ನ್ಯಾಯವಾದಿಯಾಗಿ ನೇಮಕಗೊಂಡಿದ್ದರೆ ಅಥವಾ ಪ್ರಾಧಿಕಾರದ ವಿರುದ್ಧವಾಗಿ ನ್ಯಾಯವಾದಿಯಾಗಿ ಉದ್ಯೋಗವನ್ನು ಅಂಗೀಕರಿಸಿದ್ದರೆ,

– ಅಂಥ ಸದಸ್ಯನು ಪ್ರಾಧಿಕಾರಕ್ಕೆ ನಾಮನಿರ್ದೇಶಿತನಾಗಲು ಮತ್ತು ಅಧಿಕಾರೇತರ ಸದಸ್ಯನಾಗಲು ಅನರ್ಹನಾಗಿರತಕ್ಕದ್ದು;

ಪರಂತು, ಒಬ್ಬ ವ್ಯಕ್ತಿಯು ಪ್ರಾಧಿಕಾರದ ವ್ಯವಹಾರಗಳಿಗೆ ಸಂಬಂಧಪಟ್ಟ ಯಾವುದೇ ಜಾಹೀರಾತು ಇರುವ ಯಾವುದೇ ವೃತ್ತ ಪತ್ರಿಕೆಯಲ್ಲಿ ಅವನು ಷೇರು ಅಥವಾ ಹಿತಾಸಕ್ತಿ ಹೊಂದಿರುವ ಕಾರಣ ಮಾತ್ರದಿಂದಲೇ (ಇ) ಖಂಡದ ಅಡಿಯಲ್ಲಿ ಅನರ್ಹನಾಗತಕ್ಕದ್ದಲ್ಲ ಅಥವಾ ಸದರಿ ಖಂಡದ ಅರ್ಥ ವ್ಯಾಪ್ತಿಯೊಳಗೆ ಅವನು ಯಾವುದೇ ಕರಾರು ಅಥವಾ ಉದ್ಯೋಗದಲ್ಲಿ ಯಾವುದೇ ಷೇರು ಅಥವಾ ಹಿತಾಸಕ್ತಿಯನ್ನು ಹೊಂದಿರುವನೆಂದು ಭಾವಿಸತಕ್ಕದ್ದಲ್ಲ.

**5. ಸದಸ್ಯರ ಪದಾವಧಿ ಮತ್ತು ಸೇವಾ ಷರತ್ತುಗಳು.–** (1) ರಾಜ್ಯ ಸರ್ಕಾರದ ಇಚ್ಛಾನುಸಾರ ಮತ್ತು 6ನೇ ಪ್ರಕರಣದ ಉಪಬಂಧಗಳಿಗೆ ಒಳಪಟ್ಟು, ಸರ್ಕಾರದಿಂದ ನಾಮನಿರ್ದೇಶಿತರಾದ ಅಧಿಕಾರೇತರ ಸದಸ್ಯರು ತಾವು ಪದಧಾರಣ ಮಾಡಿದ ದಿನಾಂಕದಿಂದ ಮೂರು ವರ್ಷಗಳ ಅವಧಿಯವರೆಗೆ ಅಧಿಕಾರದಲ್ಲಿರತಕ್ಕದ್ದು ಮತ್ತು ನಿಯಮಿಸಬಹುದಾದಂಥ ಷರತ್ತುಗಳ ಅಡಿಯಲ್ಲಿ ಮರುನೇಮಕಾತಿಗೆ ಅರ್ಹರಾಗಿರತಕ್ಕದ್ದು.

(2) ಸರ್ಕಾರದಿಂದ ನಾಮನಿರ್ದೇಶಿತರಾದ ಅಧಿಕಾರೇತರ ಸದಸ್ಯರು ತಮ್ಮ ಕೈ ಬರಹದಲ್ಲಿ ಸರ್ಕಾರವನ್ನು ಸಂಬೋಧಿಸಿ ಬರೆದ ಪತ್ರದ ಮೂಲಕ ತಮ್ಮ ಸ್ಥಾನಕ್ಕೆ ಯಾವುದೇ ಸಮಯದಲ್ಲಿ ರಾಜೀನಾಮೆಯನ್ನು ಸಲ್ಲಿಸಬಹುದು. ಆದರೆ ತಮ್ಮ ರಾಜೀನಾಮೆಯನ್ನು ರಾಜ್ಯ ಸರ್ಕಾರವು ಅಂಗೀಕರಿಸುವವರೆಗೆ ಅದೇ ಸ್ಥಾನದಲ್ಲಿ ಮುಂದುವರೆಯತಕ್ಕದ್ದು.

(3) ಸರ್ಕಾರದಿಂದ ನಾಮನಿರ್ದೇಶಿತಾರಾದ ಅಧಿಕಾರೇತರ ಸದಸ್ಯರು ನಿಯಮಿಸಬಹುದಾದಂಥ ಭತ್ಯೆಗಳನ್ನು ಪಡೆಯಲು ಅರ್ಹರಾಗಿರತಕ್ಕದ್ದು.

**6. ಸದಸ್ಯನನ್ನು ತೆಗೆದುಹಾಕುವುದು.–** (1) ಒಬ್ಬ ನಾಮನಿರ್ದೇಶಿತ ಅಧಿಕಾರೇತರ ಸದಸ್ಯನು.–

(ಎ) 4ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಅನರ್ಹತೆಗಳಿಗೆ ಒಳಪಡುವುದಾದರೆ; ಅಥವಾ

(ಬಿ) ಕಾರ್ಯನಿರ್ವಹಿಸಲು ನಿರಾಕರಿಸಿದರೆ ಅಥವಾ ಕಾರ್ಯನಿರ್ವಹಿಸಲು ಅಸಮರ್ಥನಾದರೆ, ಅಥವಾ

(ಸಿ) ಗೈರುಹಾಜರಾಗಲು ಅಧ್ಯಕ್ಷರಿಂದ ಅನುಮತಿ ಪಡೆಯದೇ ಪ್ರಾಧಿಕಾರದ ಮೂರು ನಿರಂತರ ಸಭೆಗಳಿಗೆ ಗೈರುಹಾಜರಾದರೆ; ಅಥವಾ

(ಡಿ) ಸದಸ್ಯನಾಗಿ ಅವನನ್ನು ಮುಂದುವರಿಸಿದರೆ ಸಾರ್ವಜನಿಕ ಹಿತದೃಷ್ಟಿಗೆ ಹಾನಿಯಾಗುತ್ತದೆ ಎಂದು ರಾಜ್ಯ ಸರ್ಕಾರವು ಅಭಿಪ್ರಾಯ ಪಡುವಂತೆ, ತನ್ನ ಸ್ಥಾನವನ್ನು ದುರುಪಯೋಗಪಡಿಸಿಕೊಂಡಿದ್ದರೆ,

– ಸರ್ಕಾರವು ಅಂತಹ ಸದಸ್ಯನನ್ನು ತೆಗೆದುಹಾಕಬಹುದು.

(2) (1)ನೇ ಉಪಪ್ರಕರಣದ (ಎ) ಮತ್ತು (ಡಿ) ಖಂಡಗಳ ಅಡಿಯಲ್ಲಿ ನಾಮನಿರ್ದೇಶಿತ ಅಧಿಕಾರೇತರ ಸದಸ್ಯರನ್ನು ತೆಗೆದುಹಾಕುವ ಆದೇಶವನ್ನು, ಅವರಿಗೆ ತಮ್ಮ ಮನವಿಯನ್ನು ಸಲ್ಲಿಸಲು ಒಂದು ಅವಕಾಶವನ್ನು ಕೊಟ್ಟ ಹೊರತು ಹೊರಡಿಸತಕ್ಕದ್ದಲ್ಲ.

**7. ಆಕಸ್ಮಿಕ ಖಾಲಿಸ್ಥಾನ ಮುಂತಾದವುಗಳು.–** (1) ಯಾವೊಬ್ಬ ಅಧಿಕಾರೇತರ ಸದಸ್ಯನ ರಾಜೀನಾಮೆಯಿಂದ ಅಥವಾ ಅನ್ಯಥಾ ಆಕಸ್ಮಿಕವಾಗಿ ಯಾವುದೇ ಖಾಲಿಸ್ಥಾನ ಉಂಟಾದರೆ ಅದನ್ನು ಸರ್ಕಾರವು ನಾಮನಿರ್ದೇಶನದ ಮೂಲಕ ಭರ್ತಿ ಮಾಡಬಹುದು ಮತ್ತು ಹಾಗೆ ನಾಮನಿರ್ದೇಶಿತನಾದ ವ್ಯಕ್ತಿಯು, ಯಾವ ಸದಸ್ಯನ ಸ್ಥಾನದಲ್ಲಿ ತಾನು ನಾಮನಿರ್ದೇಶಿತನಾಗಿರುವನೋ ಆ ಸದಸ್ಯನು ಅಧಿಕಾರ ಸ್ಥಾನವನ್ನು ಹೊಂದಿರುತ್ತಿದ್ದ ಅವಧಿಯವರೆಗೆ ಆ ಅಧಿಕಾರ ಸ್ಥಾನದಲ್ಲಿ ಇರತಕ್ಕದ್ದು.

(2) ಪ್ರಾಧಿಕಾರದ ಯಾವುದೇ ಕ್ರಮ ಅಥವಾ ವ್ಯವಹರಣೆಯು ಅದರ ಸದಸ್ಯತ್ವದಲ್ಲಿ ಯಾವುದೇ ಖಾಲಿಸ್ಥಾನ ಉಂಟಾಗಿದೆಯೆಂಬ ಅಥವಾ ಪ್ರಾಧಿಕಾರದ ರಚನೆ ಅಥವಾ ಪುನಾರಚನೆಯಲ್ಲಿ ಯಾವುದೇ ದೋಷ ಉಂಟಾಗಿದೆಯೆಂಬ ಅಥವಾ ಮೊಕದ್ದಮೆಯ ಗುಣಗಳ ಮೇಲೆ ಪ್ರಭಾವ ಬೀರದಂಥ ಯಾವುದೇ ಅಕ್ರಮವು ಪ್ರಾಧಿಕಾರದ ಕಾರ್ಯವಿಧಾನದಲ್ಲಿ ಉಂಟಾಗಿದೆಯೆಂಬ ಕಾರಣ ಮಾತ್ರದಿಂದಲೇ ಅನೂರ್ಜಿತವಾಗತಕ್ಕದ್ದಲ್ಲ.

**8. ಪ್ರಾಧಿಕಾರದ ಸಭೆಗಳು.–** (1) ಪ್ರಾಧಿಕಾರವು, ಕಡೇಪಕ್ಷ ಮೂರು ತಿಂಗಳಿಗೊಮ್ಮೆಯಾದರೂ ಸಾಮಾನ್ಯವಾಗಿ ಪ್ರಾಧಿಕಾರದ ಕಛೇರಿಯಲ್ಲಿ ಅಥವಾ ಅಧ್ಯಕ್ಷರು ನಿರ್ಧರಿಸಬಹುದಾದಂಥ ಇತರ ಸ್ಥಳದಲ್ಲಿ ಸಭೆ ಸೇರತಕ್ಕದ್ದು ಮತ್ತು (2), (3) ಮತ್ತು (4)ನೇ ಉಪ ಪ್ರಕರಣಗಳ ಉಪಬಂಧಗಳಿಗೊಳಪಟ್ಟು ಸಭೆಯಲ್ಲಿ ನಡೆಯುವ ಕಾರ್ಯಕಲಾಪಗಳಿಗೆ ಸಂಬಂಧಿಸಿದಂತೆ ವಿನಿಯಮಗಳ ಮೂಲಕ ಉಪಬಂಧಿಸಬಹುದಾದಂಥ ಪ್ರಕ್ರಿಯಾ ನಿಯಮಗಳನ್ನು ಪಾಲಿಸತಕ್ಕದ್ದು.

(2) ಅಧ್ಯಕ್ಷರು ಅಥವಾ ಅವರ ಗೈರುಹಾಜರಿಯಲ್ಲಿ ಹಾಜರಿರುವ ಸದಸ್ಯರ ಪೈಕಿಯಿಂದ ಆಯ್ಕೆಯಾದ ಯಾವೊಬ್ಬ ಸದಸ್ಯರು, ಪ್ರಾಧಿಕಾರದ ಸಭೆಯ ಅಧ್ಯಕ್ಷತೆ ವಹಿಸತಕ್ಕದ್ದು.

(3) ಸರ್ಕಾರದ ಅಧಿಕಾರಿಯಾಗಿರುವ ಯಾವೊಬ್ಬ ಸದಸ್ಯನು, ಪ್ರಾಧಿಕಾರದ ಯಾವುದೇ ಸಭೆಗೆ ಹಾಜರಾಗಲು ಅಸಮರ್ಥನಾದರೆ, ಅವನು ಅಧ್ಯಕ್ಷರಿಗೆ ವಿಷಯವನ್ನು ತಿಳಿಸಿ, ಸಭೆಗೆ ಹಾಜರಾಗಲು ತನ್ನ ಪ್ರತಿನಿಧಿಗೆ ಬರಹದಲ್ಲಿ ಅಧಿಕಾರ ನೀಡಬಹುದು.

(4) ಪ್ರಾಧಿಕಾರದ ಸಭೆಯಲ್ಲಿ ಬರುವ ಎಲ್ಲಾ ಪ್ರಶ್ನೆಗಳನ್ನು ಹಾಜರಿದ್ದ ಸದಸ್ಯರ ಬಹುಮತಗಳ ಮೂಲಕ ತೀರ್ಮಾನಿಸತಕ್ಕದ್ದು ಮತ್ತು ಸಮಾನ ಮತಗಳು ಬಿದ್ದ ಸಂದರ್ಭದಲ್ಲಿ ಅಧ್ಯಕ್ಷ ಅಥವಾ ಅವರ ಗೈರುಹಾಜರಿಯಲ್ಲಿ ಅಧ್ಯಕ್ಷತೆ ವಹಿಸುವ ಸದಸ್ಯನು ನಿರ್ಣಾಯಕ ಮತವನ್ನು ಹೊಂದಿರತಕ್ಕದ್ದು.

(5) ಸಭೆಯ ಕೋರಂ ಏಳು ಮಂದಿ ಸದಸ್ಯರಿಂದಾಗತಕ್ಕದ್ದು.

**9. ಪ್ರಾಧಿಕಾರದ ಸಿಬ್ಬಂದಿ.–** (1) ಸರ್ಕಾರವು, ಈ ಅಧಿನಿಯಮದ ಅಡಿಯಲ್ಲಿ ಪ್ರಾಧಿಕಾರವು ಪರಿಣಾಮಕಾರಿಯಾಗಿ ತನ್ನ ಪ್ರಕಾರ್ಯಗಳನ್ನು ನೆರವೇರಿಸಲು ಅಥವಾ ತನ್ನ ಅಧಿಕಾರಗಳನ್ನು ಚಲಾಯಿಸಲು ಪ್ರಾಧಿಕಾರಕ್ಕೆ ಸಾಧ್ಯವಾಗುವಂತೆ ಮಾಡುವ ಉದ್ದೇಶಕ್ಕಾಗಿ ತಾನು ಅಗತ್ಯವೆಂದು ಭಾವಿಸುವಂಥ ಸಂಖ್ಯೆಯ ತಾಂತ್ರಿಕ ಮತ್ತು ಇತರ ಸಿಬ್ಬಂದಿಯನ್ನು ಒದಗಿಸತಕ್ಕದ್ದು.

(2) ಅಂಥ ನೌಕರರ ಅಧಿಕಾರಗಳು ಮತ್ತು ಕರ್ತವ್ಯಗಳು, ನೇಮಕಾತಿ ವಿಧಾನ ಹಾಗೂ ಸೇವಾ ನಿಬಂಧನೆಗಳು ಮತ್ತು ಷರತ್ತುಗಳು ನಿಯಮಿಸಬಹುದಾದಂಥವುಗಳಾಗಿರತಕ್ಕದ್ದು.

(3) ಪ್ರಾಧಿಕಾರದ, ಯಾವುದಾದರೂ ಇದ್ದಲ್ಲಿ, ಅಧಿಕಾರಿಗಳಿಗೆ ಮತ್ತು ಸಿಬ್ಬಂದಿಗೆ ಸಂದಾಯವಾಗಬೇಕಾದ ಸಂಬಳಗಳು, ಭತ್ಯೆಗಳು ಮತ್ತು ವಿಶ್ರಾಂತಿ ವೇತನಗಳನ್ನೊಳಗೊಂಡ ಪ್ರಾಧಿಕಾರದ ಆಡಳಿತಾತ್ಮಕ ವೆಚ್ಚಗಳನ್ನು ಪ್ರಾಧಿಕಾರದ ನಿಧಿಯಿಂದ ಭರಿಸತಕ್ಕದ್ದು.

**10. ಅಂತರ್ಜಲದ ಅಭಿವೃದ್ಧಿ ಮತ್ತು ನಿರ್ವಹಣೆಯ ನಿಯಂತ್ರಣ ಹಾಗೂ ವಿನಿಯಮಕ್ಕಾಗಿ ಪ್ರದೇಶಗಳನ್ನು ಅಧಿಸೂಚಿಸುವುದಕ್ಕೆ ಅಧಿಕಾರ.–** (1) ಪ್ರಾಧಿಕಾರವು ಸರ್ಕಾರದ ಸಮಗ್ರ ನಿಯಂತ್ರಣ ಮತ್ತು ಮೇಲ್ವಿಚಾರಣೆಯಡಿಯಲ್ಲಿ ಕಾರ್ಯನಿರ್ವಹಿಸತಕ್ಕದ್ದು.

(2) ಪ್ರಾಧಿಕಾರವು, ವಿವಿಧ ತಜ್ಞ ಸಂಸ್ಥೆಗಳೊಡನೆ ಸಮಾಲೋಚನೆ ನಡೆಸಿದ ನಂತರ, ಯಾವುದೇ ಪ್ರದೇಶದಲ್ಲಿ ಯಾವುದೇ ರೂಪದಲ್ಲಿ ಅಂತರ್ಜಲವನ್ನು ತೆಗೆಯುವುದನ್ನು ಅಥವಾ ಬಳಸುವುದನ್ನು ಅಥವಾ ಇವೆರಡನ್ನೂ ವಿನಿಯಮಿಸುವುದು ಸಾರ್ವಜನಿಕ ಹಿತದೃಷ್ಟಿಯಿಂದ ಅವಶ್ಯಕ ಅಥವಾ ಯುಕ್ತವೆಂದು ಅಭಿಪ್ರಾಯಪಟ್ಟರೆ, ಅಂಥ ಯಾವುದೇ ಪ್ರದೇಶವನ್ನು ಈ ಅಧಿನಿಯಮದ ಉದ್ದೇಶಕ್ಕಾಗಿ ಅದರಲ್ಲಿ ನಿರ್ದಿಷ್ಟಪಡಿಸಿದಂಥ ದಿನಾಂಕದಿಂದ ಜಾರಿಗೆ ಬರುವಂತೆ ಅಧಿಸೂಚಿತ ಪ್ರದೇಶವೆಂದು ಘೋಷಿಸಲು ಸರ್ಕಾರಕ್ಕೆ ಸಲಹೆ ನೀಡತಕ್ಕದ್ದು.

(3) ಸರ್ಕಾರವು ಪ್ರಾಧಿಕಾರದ ಸಲಹೆಯ ಮೇರೆಗೆ, ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ, ಈ ಅಧಿನಿಯಮದ ಉದ್ದೇಶಗಳಿಗಾಗಿ, ಅದರಲ್ಲಿ ನಿರ್ದಿಷ್ಟಪಡಿಸಬಹುದಾದಂಥ ದಿನಾಂಕದಿಂದ ಜಾರಿಗೆ ಬರುವಂತೆ, ಯಾವುದೇ ಅಂಥ ಪ್ರದೇಶವನ್ನು ಅಧಿಸೂಚಿತ ಪ್ರದೇಶವೆಂದು ಘೋಷಿಸಬಹುದು:

ಪರಂತು, ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿದ ದಿನಾಂಕವು ಸದರಿ ಅಧಿಸೂಚನೆಯು ಪ್ರಕಟವಾದ ದಿನಾಂಕದಿಂದ ಮೂರು ತಿಂಗಳಿಗಿಂತ ಮುಂಚಿನ ದಿನಾಂಕವಾಗಿರತಕ್ಕದ್ದಲ್ಲ.

(4) ಅಂಥ ಪ್ರತಿಯೊಂದು ಅಧಿಸೂಚನೆಯನ್ನು ರಾಜ್ಯಪತ್ರದಲ್ಲಿ ಪ್ರಕಟಿಸುವ ಜೊತೆಗೆ, ರಾಜ್ಯದಲ್ಲಿ ವ್ಯಾಪಕ ಪ್ರಸಾರವುಳ್ಳ ಪ್ರಾದೇಶಿಕ ಭಾಷೆಯ ಕನಿಷ್ಠ ಒಂದು ದಿನಪತ್ರಿಕೆಯಲ್ಲಿ ಮತ್ತು ನಿಯಮಿಸಬಹುದಾದಂಥ ಇತರ ರೀತಿಯಲ್ಲಿ ಪ್ರಕಟಿಸತಕ್ಕದ್ದು.

(5) ಪ್ರಾಧಿಕಾರವು, ಅಧಿಸೂಚಿತ ಪ್ರದೇಶದಲ್ಲಿ ಅಂತರ್ಜಲದ ಲಭ್ಯತೆಯು ಉತ್ತಮಗೊಂಡಿದೆಯೆಂದು ಅಭಿಪ್ರಾಯ ಪಟ್ಟರೆ, ಅದು, ವಿವಿಧ ತಜ್ಞ ಸಂಸ್ಥೆಗಳೊಡನೆ ಸಮಾಲೋಚನೆ ನಡೆಸಿ, ಸರ್ಕಾರಕ್ಕೆ ಅಂಥ ಪ್ರದೇಶವನ್ನು ಅಧಿಸೂಚನೆಯಿಂದ ತೆಗೆದುಹಾಕುವಂತೆ ಸಲಹೆ ನೀಡಬಹುದು ಮತ್ತು ಸರ್ಕಾರವು ನಿಯಮಿಸಲಾದ ಪ್ರಕ್ರಿಯೆಗನುಸಾರವಾಗಿ ಹಾಗೆ ಮಾಡಬಹುದು.

(6) ನೈಸರ್ಗಿಕ ಅಂತರ್ಜಲ ಬಂಡಾರಕ್ಕೆ ಮತ್ತೆ ನೀರು ಕೂಡಿಕೊಳ್ಳುವ ಪ್ರಮಾಣಕ್ಕಿಂತಲೂ ಹೆಚ್ಚಾಗಿ ಅಂತರ್ಜಲವನ್ನು ಹೊರತೆಗೆಯದಂತೆ ನೋಡಿಕೊಳ್ಳಲೂ ಪ್ರಾಧಿಕಾರವು ಕ್ರಮ ಕೈಗೊಳ್ಳತಕ್ಕದ್ದು.

(7) ಸರ್ಕಾರವು, ಪ್ರಾಧಿಕಾರದ ಸಲಹೆಯನ್ನು ಪಡೆದು, ನಿಯಂತ್ರಣ ಕ್ರಮಗಳ ಜೊತೆಗೆ ಅಂತರ್ಜಲ ಸಂಪನ್ಮೂಲಗಳನ್ನು ಸಾಧ್ಯವಾದಷ್ಟು ಮಟ್ಟಿಗೆ ಹೆಚ್ಚಿಸುವಂತೆ ನೋಡಿಕೊಳ್ಳಲು ಕ್ರಮ ಕೈಗೊಳ್ಳತಕ್ಕದ್ದು.

(8) ಪ್ರಾಧಿಕಾರವು ಅಂತರ್ಜಲ ಸಂಬಂಧಿತ ಮಾಹಿತಿಯ ಅಂಕಿ ಅಂಶಗಳನ್ನು ನಿರ್ವಹಿಸಿಕೊಂಡು ಬರತಕ್ಕದ್ದು ಮತ್ತು ದೈನಂದಿಕವಾಗಿ ಸರಿಪಡಿಸಿಕೊಂಡು ಬರತಕ್ಕದ್ದು.

**11. ಅಧಿಸೂಚಿತ ಪ್ರದೇಶದಲ್ಲಿ ಅಂತರ್ಜಲವನ್ನು ತೆಗೆಯಲು ಮತ್ತು ಬಳಸಲು ಅನುಮತಿಯ ನೀಡಿಕೆ.–** (1) ಕುಡಿಯುವ ನೀರಿನ ಸಾರ್ವಜನಿಕ ಮೂಲಗಳ ಸಂರಕ್ಷಣೆಗೆ ಸಂಬಂಧಿಸಿದ ಯಾವುದೇ ಕಾನೂನಿನ ಉಪಬಂಧಗಳಿಗೊಳಪಟ್ಟು, ಯಾವೊಬ್ಬ ಅಂತರ್ಜಲ ಬಳಕೆದಾರನು, ವೈಯಕ್ತಿಕ ಅಥವಾ ಸಮುದಾಯದ ಬಳಕೆಯ ಯಾವುದೇ ಉದ್ದೇಶಕ್ಕಾಗಿ ಅಧಿಸೂಚಿತ ಪ್ರದೇಶದಲ್ಲಿ ಬಾವಿಯನ್ನು ಕೊರೆಯಲು ಅಥವಾ ತೋಡಲು ಇಚ್ಛಿಸಿದಲ್ಲಿ, ಆತನು ಈ ಉದ್ದೇಶಕ್ಕಾಗಿ ಅನುಮತಿಯನ್ನು ಕೋರಿ ಪ್ರಾಧಿಕಾರಕ್ಕೆ ಅರ್ಜಿಯನ್ನು ಸಲ್ಲಿಸತಕ್ಕದ್ದು ಮತ್ತು ಪ್ರಾಧಿಕಾರದಿಂದ ಅನುಮತಿಯನ್ನು ಪಡೆದ ಹೊರತು ಹಾಗೆ ಕೊರೆಯುವುದಕ್ಕೆ ಅಥವಾ ತೋಡುವುದಕ್ಕೆ ಸಂಬಂಧಿಸಿದ ಯಾವುದೇ ಚಟುವಟಿಕೆಗೆ ತೊಡಗತಕ್ಕದ್ದಲ್ಲ.

(2) (1)ನೇ ಉಪಪ್ರಕರಣದಡಿಯಲ್ಲಿನ ಪ್ರತಿಯೊಂದು ಅರ್ಜಿಯನ್ನು ಕೈಗಾರಿಕೆ, ವಾಣಿಜ್ಯ ಮನೋರಂಜನೆ, ಕೃಷಿ ಮತ್ತು ಗೃಹಕೃತ್ಯ ಮುಂತಾದ ಬೇರ ಬೇರೆ ಉದ್ದೇಶಗಳಿಗಾಗಿ, ಬೇರೆ ಬೇರೆ ಪ್ರದೇಶಗಳಿಗಾಗಿ ನಿಯಮಿಸಬಹುದಾದಂಥ ಶುಲ್ಕದ ಜೊತೆಗೆ, ಅಂಥ ವಿವರಗಳನ್ನೊಳಗೊಂಡು ಅಂಥ ರೀತಿಯಲ್ಲಿ ಹಾಗೂ ಅಂಥ ನಮೂನೆಯಲ್ಲಿ ಸಲ್ಲಿಸತಕ್ಕದ್ದು.

(3) (1)ನೇ ಉಪ ಪ್ರಕರಣದಡಿಯಲ್ಲಿನ ಅರ್ಜಿಯನ್ನು ಸ್ವೀಕರಿಸಿದ ತರುವಾಯ, ಅನುಮತಿಪತ್ರ ನೀಡುವುದು ಸಾರ್ವಜನಿಕ ಹಿತಾಸಕ್ತಿಗೆ ವಿರುದ್ಧವಾಗುವುದಿಲ್ಲ ಎಂದು ಪ್ರಾಧಿಕಾರಕ್ಕೆ ಮನವರಿಕೆಯಾದರೆ, ಅದು, ಅದರಲ್ಲಿ ನಿರ್ದಿಷ್ಟ ಪಡಿಸಬಹುದಾದಂಥ ಷರತ್ತುಗಳು ಮತ್ತು ನಿರ್ಬಂಧಗಳಿಗೊಳಪಟ್ಟು, ಅಂತರ್ಜಲವನ್ನು ತೆಗೆಯುವುದಕ್ಕೆ ಮತ್ತು ಬಳಸುವುದಕ್ಕೆ ಬಾವಿಯನ್ನು ಕೊರೆಯುವುದಕ್ಕೆ ಅಥವಾ ತೋಡುವುದಕ್ಕೆ ಅಧಿಕಾರ ನೀಡುವ ಅನುಮತಿಪತ್ರವನ್ನು ನೀಡಬಹುದು. ಷರತ್ತುಗಳಲ್ಲಿ, ಪ್ರಾಧಿಕಾರವು ನಿರ್ದಿಷ್ಟಪಡಿಸುವ ಅವಧಿಯೊಳಗಾಗಿ ಸೂಕ್ತ ಅಳತೆಯ ಕೃತಕ ಮರುಪೂರಣ ರಚನೆಗಳನ್ನು ಅರ್ಜಿದಾರನು ಕಟ್ಟಿಸಬೇಕೆಂಬ ಕಡ್ಡಾಯ ಉಪಬಂಧವೂ ಸೇರಿರತಕ್ಕದ್ದು:

ಪರಂತು, ಯಾವ ವ್ಯಕ್ತಿಗೂ, ತನ್ನ ಅಹವಾಲು ಹೇಳಿಕೊಳ್ಳಲು ಅವಕಾಶವನ್ನು ಕೊಡದೆ, ಅನುಮತಿಪತ್ರವನ್ನು ನಿರಾಕರಿಸತಕ್ಕದ್ದಲ್ಲ.

(4) ಅನುಮತಿಪತ್ರ ಮಂಜೂರು ಮಾಡಲಾಗಿದೆ ಅಥವಾ ನಿರಾಕರಿಸಲಾಗಿದೆ ಎಂಬ ತಮ್ಮ ತೀರ್ಮಾನದ ಬಗ್ಗೆ ಅರ್ಜಿಯು ಸ್ವೀಕೃತವಾದ ದಿನಾಂಕದಿಂದ ಅರವತ್ತು ದಿನಗಳೊಳಗಾಗಿ, ಅರ್ಜಿದಾರನಿಗೆ ಪ್ರಾಧಿಕಾರವು ತಿಳಿಸತಕ್ಕದ್ದು.

(5) ಅನುಮತಿಪತ್ರವನ್ನು ಮಂಜೂರು ಮಾಡುವಾಗ ಅಥವಾ ನಿರಾಕರಿಸುವಾಗ ಪ್ರಾಧಿಕಾರವು ಈ ಮುಂದಿನವುಗಳನ್ನು ಗಮನದಲ್ಲಿಟ್ಟುಕೊಳ್ಳತಕ್ಕದ್ದು, ಎಂದರೆ :–

(ಎ) ಅಂತರ್ಜಲವನ್ನು ಯಾವ ಉದ್ದೇಶಕ್ಕಾಗಿ ಬಳಸಲಾಗುವುದು ಎಂದರೆ, – ಗೃಹಕೃತ್ಯ, ಕೃಷಿ, ಕೈಗಾರಿಕೆ, ವಾಣಿಜ್ಯ, ಸಂಸ್ಥೆಗಳ, ಮನೋರಂಜನೆಗಾಗಿ – ಮಾರಾಟ ಅಥವಾ ಸ್ವಂತ ಬಳಕೆ ಅಥವಾ ಇವೆರಡು – ಸೂಚಿಸುವುದು;

(ಬಿ) ಅಧಿಸೂಚಿತ ಪ್ರದೇಶಗಳಲ್ಲಿ ಭತ್ತ, ಕಬ್ಬುಗಳಂಥ ಹೆಚ್ಚು ನೀರುಬೇಕಾದ ಬೆಳೆಗಳಿಗೆ ಅನುಮತಿ ನೀಡತಕ್ಕದ್ದಲ್ಲ;

(ಸಿ) ಇತರ ಸ್ಪರ್ಧಾತ್ಮಕ ಬಳಕೆದಾರರು ಇರುವಿಕೆ;

(ಡಿ) ಅಂತರ್ಜಲದ ಲಭ್ಯತೆ ಮತ್ತು ಅದನ್ನು ಸಂರಕ್ಷಿಸಬೇಕಾದ ಅವಶ್ಯಕತೆ;

(ಇ) ಹೊರತೆಗೆಯಲು ಉದ್ದೇಶಿಸಿದ ಅಂತರ್ಜಲದ ಪರಿಮಾಣ;

(ಎಫ್) ಬಳಸುವ ಉದ್ದೇಶಕ್ಕೆ ಸಂಬಂಧಿಸಿದಂತೆ ಅಂತರ್ಜಲದ ಗುಣಮಟ್ಟ;

(ಜಿ) ಅಂತರ್ಜಲವನ್ನು ಯಾವ ಉದ್ದೇಶಕ್ಕಾಗಿ ಬಳಸಬೇಕಾಗಿದೆ ಎಂಬುದನ್ನು ಗಮನದಲ್ಲಿಟ್ಟುಕೊಂಡು ಅಂತರ್ಜಲ ರಚನೆಗಳ ನಡುವೆ ಅಂತರಬಿಡುವುದು ;

(ಎಚ್) ದೀರ್ಘಾವಧಿಯಲ್ಲಿ ಅಂತರ್ಜಲ ಮಟ್ಟದ ಏರಿಳಿತ;

(ಐ) ಹತ್ತಿರದ ಯಾವುದೇ ಕುಡಿಯುವ ನೀರಿನ ಮೂಲಗಳಲ್ಲಿ ನೀರಿನ ಲಭ್ಯತೆಗೆ ಇದು ಪ್ರತಿಕೂಲ ಪರಿಣಾಮ ಬೀರುವ ಸಂಭಾವ್ಯತೆ;

(ಜೆ) ಹನಿ ಮತ್ತು ಸಿಂಪರಣೆ ನೀರಾವರಿ ಪದ್ಧತಿಯನ್ನು ಬಳಸುವವರಿಗೆ ಆದ್ಯತೆಯನ್ನು ನೀಡುವುದು;

(ಕೆ) ಅದಕ್ಕೆ ಸಂಬಂಧಪಟ್ಟ ಇತರ ಯಾವುದೇ ಅಂಶಗಳು.

(6) ಅನುಮತಿ ಪತ್ರವು ಅಂಥ ನಿಬಂಧನೆಗಳು ಮತ್ತು ಷರತ್ತುಗಳಿಗೆ ಒಳಪಟ್ಟು ಮತ್ತು ನಿಯಮಿಸಲಾದ ಅಂಥ ನಮೂನೆಯಲ್ಲಿ ಇರತಕ್ಕದ್ದು.

**12. ಅಧಿಸೂಚಿತ ಪ್ರದೇಶಗಳಲ್ಲಿ ಪ್ರಸ್ತುತ ಇರುವ ಬಳಕೆದಾರರ ನೋಂದಣಿ.–** (1) ಅಧಿಸೂಚಿತ ಪ್ರದೇಶದಲ್ಲಿ ಪ್ರಸ್ತುತ ಇರುವ ಪ್ರತಿಯೊಬ್ಬ ಅಂತರ್ಜಲದ ಬಳಕೆದಾರನು, ನಿಯಮಿಸಲಾದ ನಮೂನೆಯಲ್ಲಿ ಮತ್ತು ಅಂಥ ರೀತಿಯಲ್ಲಿ, ಸರ್ಕಾರವು ಅಧಿಸೂಚಿತ ಪ್ರದೇಶವೆಂದು ಘೋಷಿಸಿದ ದಿನಾಂಕದಿಂದ ನೂರ ಇಪ್ಪತ್ತು ದಿನಗಳೊಳಗಾಗಿ, ಪ್ರಾಧಿಕಾರಕ್ಕೆ ತಾನು ಪ್ರಸ್ತುತ ಮಾಡುತ್ತಿರುವ ಬಳಕೆಗೆ ಮನ್ನಣೆ ನೀಡಿ ನೋಂದಣಿ ಪ್ರಮಾಣ ಪತ್ರವನ್ನು ಕೊಡಬೇಕೆಂದು ಕೋರಿ ಅರ್ಜಿ ಸಲ್ಲಿಸತಕ್ಕದ್ದು:

ಪರಂತು, ಪ್ರಾಧಿಕಾರವು ಬಳಕೆದಾರನು ಸದರಿ ನೂರ ಇಪ್ಪತ್ತು ದಿನಗಳ ಒಳಗೆ ಅರ್ಜಿಯನ್ನು ಸಲ್ಲಿಸದೇ ಇರಲು ಸಾಕಷ್ಟು ಕಾರಣಗಳಿದ್ದವು ಎಂದು ಮನಗಂಡರೆ ಸದರಿ ಅವಧಿಯು ಮುಗಿದ ತರುವಾಯವೂ ಅರ್ಜಿಯನ್ನು ಸ್ವೀಕರಿಸಬಹುದು.

(2) (1)ನೇ ಉಪ–ಪ್ರಕರಣದಡಿಯ ಅರ್ಜಿಯಲ್ಲಿ ಒದಗಿಸಬೇಕಾದ ವಿವರಗಳು ಈ ಕೆಳಗಿನವುಗಳನ್ನೊಳ ಗೊಂಡಿರತಕ್ಕದ್ದು, ಎಂದರೆ:–

(ಎ) ಬಾವಿಯ ಮಾದರಿ, ಅದು ಇರುವ ನಿರ್ದಿಷ್ಟ ಸ್ಥಳ ಮುಂತಾದ ಅಂತರ್ಜಲ ಮೂಲದ ವಿವರ;

(ಬಿ) ಬಳಸಲಾಗುವ ನೀರೆತ್ತುವ ಸಾಧನ;

(ಸಿ) ಅಂತರ್ಜಲವನ್ನು ತೆಗೆದುಕೊಳ್ಳುವ ಪರಿಮಾಣ ಮತ್ತು ಒಂದು ದಿನದಲ್ಲಿ ಎಷ್ಟು ಘಂಟೆಗಳ ಕಾಲ ಹಾಗೆ ತೆಗೆದುಕೊಳ್ಳಲಾಗುತ್ತದೆ;

(ಡಿ) ಪ್ರತಿವರ್ಷ ಎಷ್ಟು ಕಾಲ ಅದನ್ನು ಬಳಸಿಕೊಳ್ಳಲಾಗುತ್ತದೆ;

(ಇ) ಅಂತರ್ಜಲವನ್ನು ತೆಗೆದುಕೊಳ್ಳುವ ಉದ್ದೇಶ ಅಥವಾ ಉದ್ದೇಶಗಳು;

(ಎಫ್) ಕುಡಿಯುವ ನೀರಿನ ಉದ್ದೇಶಕ್ಕಾಗಿ ಅಂತರ್ಜಲ ಬಳಸುತ್ತಿದ್ದರೆ, ಅದನ್ನು ಬಳಸಿಕೊಳ್ಳುತ್ತಿರುವ ಅಂದಾಜು ಜನಸಂಖ್ಯೆ;

(ಜಿ) ನೀರಾವರಿ ಬಾವಿಯ ಪ್ರಕರಣದಲ್ಲಿ, ನೀರಾವರಿ ಜಮೀನು ಇರುವ ಸ್ಥಳ ಹಾಗೂ ಅದರ ವಿಸ್ತೀರ್ಣ ಮತ್ತು ಬೆಳೆಯುತ್ತಿರುವ ಬೆಳೆಗಳು;

(ಎಚ್) ರಾಜ್ಯ ಮತ್ತು ಕೇಂದ್ರ ಸರ್ಕಾರದ, ಸ್ಥಳೀಯ ಪ್ರಾಧಿಕಾರಗಳ ಅಥವಾ ಸಮುದಾಯ ನಡೆಸುತ್ತಿರುವ ನೀರು ಸರಬರಾಜು ಯೋಜನೆಗಳ ಸಂದರ್ಭದಲ್ಲಿ ತೆಗೆದ ಅಂತರ್ಜಲದ ಪರಿಮಾಣ, ಬೇರೆ ಕಡೆ ತಿರುಗಿಸುವ ಅಥವಾ ಪಂಪು ಮಾಡುವ ಪಾಯಿಂಟುಗಳು ಮತ್ತು ಅವು ಇರುವ ಸ್ಥಳಗಳ ಜೊತೆಗೆ ಒದಗಿಸುತ್ತಿರುವ ಸೇವೆಗಳ ವಿವರಗಳು.

(3) (1)ನೇ ಉಪ ಪ್ರಕರಣದಡಿಯಲ್ಲಿ ಅರ್ಜಿಯನ್ನು ಸ್ವೀಕರಿಸಿದ ತರುವಾಯ, ಪ್ರಾಧಿಕಾರವು, ತನಗೆ ಸರಿಯೆನಿಸುವಂಥ ವಿಚಾರಣೆ ಮಾಡಿದ ನಂತರ ಮತ್ತು ಅದಕ್ಕೆ ಮನದಟ್ಟಾದರೆ, ನಿಯಮಿಸಲಾದಂಥ ಷರತ್ತಿಗೊಳಪಟ್ಟು, ಅಂಥ ಅವಧಿಗೆ ಅಂಥ ನಮೂನೆಯಲ್ಲಿ ನೋಂದಣಿ ಪ್ರಮಾಣಪತ್ರವನ್ನು ಮಂಜೂರು ಮಾಡಬಹುದು.

(4) ನೋಂದಣಿ ಪ್ರಮಾಣ ಪತ್ರವನ್ನು ಮಂಜೂರು ಮಾಡಿದ ಅಥವಾ ನಿರಾಕರಿಸಿದ ಬಗ್ಗೆ ತೀರ್ಮಾನವನ್ನು ಪ್ರಾಧಿಕಾರವು ಅರ್ಜಿದಾರನಿಗೆ ಅರ್ಜಿಯನ್ನು ಸ್ವೀಕರಿಸಿದ ಮೂವತ್ತು ದಿನಗಳ ಅವಧಿಯ ಒಳಗಾಗಿ ತಿಳಿಸತಕ್ಕದ್ದು.

(5) (3)ನೇ ಉಪ ಪ್ರಕರಣದಡಿಯಲ್ಲಿ ನೋಂದಣಿ ಪ್ರಮಾಣ ಪತ್ರವನ್ನು ಮಂಜೂರು ಮಾಡುವಾಗ ಅಥವಾ ನಿರಾಕರಿಸುವಾಗ ಪ್ರಾಧಿಕಾರವು ಈ ಮುಂದಿನವುಗಳನ್ನು ಸೂಕ್ತವಾಗಿ ಗಮನದಲ್ಲಿಟ್ಟುಕೊಳ್ಳತಕ್ಕದ್ದು:–

(ಎ) ಅಂತರ್ಜಲವನ್ನು ಯಾವ ಉದ್ದೇಶಕ್ಕಾಗಿ ಬಳಸಲಾಗುವುದು.

(ಬಿ) ಹೆಚ್ಚು ನೀರನ್ನು ಬಳಸುವ ಭತ್ತ ಮತ್ತು ಕಬ್ಬಿನಂತಹ ಬೆಳೆಯನ್ನು ಬೆಳೆಯುವ ಅರ್ಜಿದಾರರ ಸಂದರ್ಭದಲ್ಲಿ, ಅವರಿಂದ ಹೆಚ್ಚು ನೀರನ್ನು ಬಳಸುವ ಬೆಳೆಯಿಂದ ಕಡಿಮೆ ನೀರು ಬಳಸುವ ಬೆಳೆಗಳಿಗೆ ಬೇಸಾಯ ಬದಲಾವಣೆ ಮಾಡಿಕೊಂಡ ಬಗ್ಗೆ ಒಂದು ಮುಚ್ಚಳಿಕೆಯನ್ನು ಪಡೆದುಕೊಂಡು, ನೋಂದಣಿ ಪ್ರಮಾಣ ಪತ್ರದಲ್ಲಿ ಅಂಥ ಬದಲಾವಣೆಯನ್ನು ನಮೂದಿಸತಕ್ಕದ್ದು.

(ಸಿ) ಇತರ ಸ್ಪರ್ಧಾತ್ಮಕ ಬಳಕೆದಾರರು ಇರುವಿಕೆ;

(ಡಿ) ಅಂತರ್ಜಲದ ಲಭ್ಯತೆ ಮತ್ತು ಅದನ್ನು ಸಂರಕ್ಷಿಸಬೇಕಾದ ಅವಶ್ಯಕತೆ; ಹೊರತೆಗೆಯಲು ಉದ್ದೇಶಿಸಿದ ಅಂತರ್ಜಲದ ಪರಿಮಾಣ;

(ಇ) ಬಳಸುವ ಉದ್ದೇಶಕ್ಕೆ ಸಂಬಂಧಿಸಿದಂತೆ ಅಂತರ್ಜಲದ ಗುಣಮಟ್ಟ;

(ಎಫ್) ಅಂತರ್ಜಲವನ್ನು ಬಳಸಬೇಕಾದ ಉದ್ದೇಶವನ್ನು ಗಮನದಲ್ಲಿಟ್ಟುಕೊಂಡು ಅಂತರ್ಜಲ ರಚನೆಗಳ ನಡುವೆ ಅಂತರ ಬಿಡುವುದು;

(ಜಿ) ದೀರ್ಘಾವಧಿಯಲ್ಲಿ ಅಂತರ್ಜಲ ಮಟ್ಟದ ಏರಿಳಿತ;

(ಎಚ್) ಅದಕ್ಕೆ ಸಂಬಂಧಪಟ್ಟ ಇತರ ಯಾವುದೇ ಅಂಶಗಳು.

(6) ನೋಂದಣಿ ಪ್ರಮಾಣಪತ್ರವು ನಿಯಮಿಸಬಹುದಾದಂಥ ನಮೂನೆಯಲ್ಲಿರತಕ್ಕದ್ದು.

(7) (1)ನೇ ಉಪ–ಪ್ರಕರಣದಡಿಯಲ್ಲಿನ ಅರ್ಜಿಯ ಮೇಲಿನ ತೀರ್ಮಾನವನ್ನು ಪ್ರಾಧಿಕಾರವು ತಿಳಿಸದೇ ಇರುವ ಸಂದರ್ಭದಲ್ಲಿ, ಅಧಿಸೂಚಿತ ಪ್ರದೇಶದಲ್ಲಿ ಪ್ರಸ್ತುತ ಇರುವ ಅಂತರ್ಜಲದ ಪ್ರತಿಯೊಬ್ಬ ಬಳಕೆದಾರನು, ಆತನ ಅರ್ಜಿಯ ದಿನಾಂಕಕ್ಕೆ ಮೊದಲು ಅಂತರ್ಜಲವನ್ನು ಬಳಸುತ್ತಿದ್ದ ರೀತಿಯಲ್ಲಿಯೇ ಮತ್ತು ಅದೇ ಪರಿಮಾಣದಲ್ಲಿಯೇ ಬಳಸುವುದನ್ನು ಮುಂದುವರಿಸುವುದಕ್ಕೆ ಹಕ್ಕುಳ್ಳವನಾಗಿರತಕ್ಕದ್ದು.

(8) ನೋಂದಾಯಿತ ಬಾವಿಯು ನಿಷ್ಕ್ರಿಯವಾದಲ್ಲಿ, ತಕ್ಷಣವೇ ಈ ಅಂಶವನ್ನು ಅಂತರ್ಜಲ ಬಳಕೆದಾರನು ಪ್ರಾಧಿಕಾರದ ಗಮನಕ್ಕೆ ತರತಕ್ಕದ್ದು ಮತ್ತು ಯಾವುದೇ ಅನುಚಿತ ಘಟನೆಗಳು ಸಂಭವಿಸುವುದನ್ನು ತಡೆಗಟ್ಟುವುದಕ್ಕಾಗಿ ನಿಷ್ಕ್ರಿಯವಾದ ಕೊಳವೆ ಬಾವಿಗಳನ್ನು ಸೀಲು ಮಾಡತಕ್ಕದ್ದು.

**13. ಕೊರೆಯುವ ಏಜೆನ್ಸಿಗಳ ನೋಂದಣಿ.–** (1) ಅಂತರ್ಜಲವನ್ನು ತೆಗೆಯುವ ಅಥವಾ ಬಾವಿಯನ್ನು ಕೊರೆಯುವ ಅಥವಾ ತೋಡುವ ವ್ಯವಹಾರವನ್ನು ಕೈಗೊಳ್ಳಬೇಕೆನ್ನುವ ಅಪೇಕ್ಷೆಯುಳ್ಳ ಪ್ರತಿಯೊಬ್ಬ ವ್ಯಕ್ತಿಯು ಪ್ರಾಧಿಕಾರದಲ್ಲಿ, ನಿಯಮಿಸಬಹುದಾದಂಥ ರೀತಿಯಲ್ಲಿ ತನ್ನ ಯಂತ್ರ ಸಾಮಗ್ರಿಯನ್ನು ನೋಂದಾಯಿಸತಕ್ಕದ್ದು.

(2) ಈ ಅಧಿನಿಯಮವು ಜಾರಿಯಾದ ದಿನಾಂಕದಿಂದ ಆರು ತಿಂಗಳ ಅವಧಿಯು ಪೂರ್ಣಗೊಂಡ ನಂತರ, ಈ ಅಧಿನಿಯಮದಡಿ ಪ್ರಾಧಿಕಾರವು ಮಂಜೂರು ಮಾಡಿದ ನೋಂದಣಿಯು ಷರತ್ತು ಮತ್ತು ನಿಬಂಧನೆಗಳಿಗೆ ಅನುಸಾರವಾಗಿ ಮತ್ತು ಅದರಡಿಯಲ್ಲಿ ಅಲ್ಲದೆ, ಯಾವ ವ್ಯಕ್ತಿಯೂ ತಾನಾಗಿಯೇ ಅಥವಾ ತನ್ನ ಪರವಾಗಿ ಇತರೆ ಯಾವುದೇ ವ್ಯಕ್ತಿಯ ಮೂಲಕ, ಅಂತರ್ಜಲವನ್ನು ತೆಗೆಯುವ ಅಥವಾ ಬಾವಿಯನ್ನು ಕೊರೆಯುವ ಅಥವಾ ತೋಡುವ ವ್ಯವಹಾರವನ್ನು ಕೈಗೊಳ್ಳತಕ್ಕದ್ದಲ್ಲ.

(3) ಪ್ರತಿಯೊಬ್ಬ ವ್ಯಕ್ತಿಯು, (1)ನೇ ಉಪ–ಪ್ರಕರಣದಡಿ ನೋಂದಣಿ ಪಡೆದುಕೊಳ್ಳುವ ಉದ್ದೇಶಕ್ಕಾಗಿ, ನಿಯಮಿಸಲಾದಂಥ ನಮೂನೆಯಲ್ಲಿ, ಅಂಥ ವಿವರಗಳನ್ನೊಳಗೊಂಡಂಥ ಮತ್ತು ಅಂಥ ಶುಲ್ಕಗಳೊಡನೆ ಪ್ರಾಧಿಕಾರಕ್ಕೆ ಅರ್ಜಿಯನ್ನು ಸಲ್ಲಿಸತಕ್ಕದ್ದು.

(4) (2)ನೇ ಉಪ–ಪ್ರಕರಣದಡಿಯಲ್ಲಿ ಅರ್ಜಿಯನ್ನು ಸ್ವೀಕರಿಸಿದ ತರುವಾಯ, ತಾನು ಸೂಕ್ತವೆಂದು ಭಾವಿಸುವಂಥ ವಿಚಾರಣೆ ನಡೆಸಿದ ನಂತರ ಪ್ರಾಧಿಕಾರವು ಅರ್ಜಿದಾರನಲ್ಲಿ ಅಂತರ್ಜಲವನ್ನು ತೆಗೆಯಲು ಬೇಕಾದ ಸಾಧನಗಳಿವೆ ಮತ್ತು ಬಾವಿಯನ್ನು ಕೊರೆಯುವ ಅಥವಾ ತೋಡುವ ಕಾರ್ಯಕ್ಕೆ ಬೇಕಾದ ಜ್ಞಾನವಿದೆ ಎಂದು ತನಗೆ ಮನದಟ್ಟಾದರೆ, ನಿಯಮಿಸಲಾದಂಥ ಷರತ್ತಿಗೊಳಪಟ್ಟು, ಅಂಥ ಅವಧಿಗೆ ಅಂಥ ನಮೂನೆಯಲ್ಲಿ ನೋಂದಣಿ ಪ್ರಮಾಣಪತ್ರವನ್ನು ಮಂಜೂರು ಮಾಡಬಹುದು.

**14. ಅನುಮತಿ ಪತ್ರದ ಅಥವಾ ನೋಂದಣಿ ಪ್ರಮಾಣ ಪತ್ರದ ನಿಬಂಧನೆಗಳ ಮಾರ್ಪಾಟು, ತಿದ್ದುಪಡಿ ಅಥವಾ ಅಧಿಕಾರ.–** ಸಂದರ್ಭಾನುಸಾರ ಅನುಮತಿ ಪತ್ರ ಅಥವಾ ನೋಂದಣಿ ಪ್ರಮಾಣ ಪತ್ರವನ್ನು ಮಂಜೂರು ಮಾಡಿದ ಮೇಲೆ ಪ್ರಾಧಿಕಾರವು ಯಾವುದೇ ಕಾಲದಲ್ಲಿ ತಾಂತ್ರಿಕ ಕಾರಣಗಳಿಗಾಗಿ, ಅನುಮತಿ ಪತ್ರ ಅಥವಾ ನೋಂದಣಿ ಪ್ರಮಾಣ ಪತ್ರದ ನಿಬಂಧನೆಗಳನ್ನು ಮಾರ್ಪಡಿಸಬಹುದು, ತಿದ್ದುಪಡಿ ಮಾಡಬಹುದು ಅಥವಾ ಬದಲಾವಣೆ ಮಾಡಬಹುದು. ಪರಂತು, ಅಂತರ್ಜಲ ಬಳಕೆದಾರನಿಗೆ ತನ್ನ ಅಹವಾಲು ಹೇಳಿಕೊಳ್ಳಲು ಅವಕಾಶವನ್ನು ಕೊಟ್ಟಿರಬೇಕು:

ಪರಂತು, ಪ್ರಾಧಿಕಾರವು ಅಂಥ ಯಾವುದೇ ಕ್ರಮ ತೆಗೆದುಕೊಳ್ಳುವ ಮೊದಲು ಬೆಳೆದು ನಿಂತಿರುವ ಬೆಳೆ ಅಥವಾ ಬೆಳೆಗಳಿಗೆ ಹಾನಿಯಾಗದಂತೆ ನೋಡಿಕೊಳ್ಳತಕ್ಕದ್ದು.

**15. ಅನುಮತಿ ಪತ್ರವನ್ನು ಅಥವಾ ನೋಂದಣಿ ಪ್ರಮಾಣ ಪತ್ರವನ್ನು ರದ್ದುಗೊಳಿಸುವುದು.–** ಪ್ರಾಧಿಕಾರಕ್ಕೆ, ಈ ಸಂಬಂಧದಲ್ಲಿ ತನಗೆ ಪರಿಶೀಲಿಸಲು ಕಳುಹಿಸಿಕೊಟ್ಟಾಗ ಅಥವಾ ಅನ್ಯಥಾ,–

(ಎ) ಅನುಮತಿ ಪತ್ರ ಅಥವಾ ನೋಂದಣಿ ಪ್ರಮಾಣಪತ್ರವನ್ನು ಮೋಸದಿಂದ ಅಥವಾ ತಪ್ಪು ನಿರೂಪಣೆ ಮಾಡಿ ಪಡೆಯಲಾಗಿದೆಯೆಂದು, ಅಥವಾ

(ಬಿ) ಅನುಮತಿಪತ್ರ ಅಥವಾ ನೋಂದಣಿ ಪ್ರಮಾಣ ಪತ್ರವನ್ನು ಹೊಂದಿರುವವನು ಅನುಮತಿ ಪತ್ರವನ್ನು ಅಥವಾ ನೋಂದಣಿ ಪ್ರಮಾಣ ಪತ್ರವನ್ನು ಅಥವಾ ಲೈಸನ್ಸನ್ನು ಯಾವ ಷರತ್ತಿನ ಮೇಲೆ ನೀಡಲಾಗಿತ್ತೋ ಅದನ್ನು ಯಾವುದೇ ಸಮಂಜಸ ಕಾರಣಗಳಿಲ್ಲದೆ ಪಾಲಿಸಲು ವಿಫಲನಾಗಿದ್ದಾನೆಂದು ಅಥವಾ ಈ ಅಧಿನಿಯಮದ ಅಥವಾ ಅದರ ಅಡಿಯಲ್ಲಿ ರಚಿಸಿದ ನಿಯಮಗಳ ಯಾವುದೇ ಉಪಬಂಧಗಳನ್ನು ಉಲ್ಲಂಘಿಸಿದ್ದಾನೆಂದು, ಅಥವಾ

(ಸಿ) ಅಂತರ್ಜಲದ ಬಳಕೆಯನ್ನು ಅಥವಾ ತೆಗೆಯುವುದನ್ನು ಮಿತಿಗೊಳಿಸಲೇಬೇಕಾದ ಸನ್ನಿವೇಶವು ಉಂಟಾಗಿದೆಯೆಂದು;

(ಡಿ) ಕೊರೆಯುವ ಅಥವಾ ಕೊರೆಯುವ ಅಥವಾ ತೋಡುವ ಏಜೆನ್ಸಿಗಳ ಪ್ರಕರಣದಲ್ಲಿ, ಪೈಪುಗಳೂ ಮತ್ತು ಪಂಪುಗಳೂ ಸೇರಿದಂತೆ ಸಾಧನ ಸಾಮಗ್ರಿಗಳನ್ನು ಸ್ಥಾಪಿಸುವುದು ಅಥವಾ ಕೊರೆಯುವ ಕೆಲಸವನ್ನು ಕೆಳದರ್ಜೆಯ ಗುಣಮಟ್ಟದಲ್ಲಿ ಮಾಡಿರುವನೆಂದು,

– ಮನವರಿಕೆಯಾದರೆ, ಅದು ಈ ಅಧಿನಿಯಮದ ಅಡಿಯಲ್ಲಿ ಅಥವಾ ಯಾವುದೇ ಇತರ ಕಾನೂನಿನ ಅಡಿಯಲ್ಲಿ ಅನುಮತಿ ಪತ್ರವನ್ನು ಅಥವಾ ನೋಂದಣಿ ಪ್ರಮಾಣ ಪತ್ರವನ್ನು ಹೊಂದಿರುವವನು ಗುರಿಯಾಗಬಹುದಾದ ಯಾವುದೇ ದಂಡಕ್ಕೆ ಪ್ರತಿಕೂಲವಾಗದಂತೆ, ಇತರ ಅನುಮತಿಪತ್ರ ಅಥವಾ ನೋಂದಣಿ ಪ್ರಮಾಣ ಪತ್ರವನ್ನು ಹೊಂದಿರುವವನಿಗೆ ತನ್ನ ಅಹವಾಲು ಹೇಳಿಕೊಳ್ಳಲು ಅವಕಾಶವನ್ನು ನೀಡಿದ ತರುವಾಯ, ಸಂದರ್ಭಾನುಸಾರ ಅನುಮತಿ ಪತ್ರವನ್ನು ಅಥವಾ ನೋಂದಣಿ ಪ್ರಮಾಣ ಪತ್ರವನ್ನು ರದ್ದುಗೊಳಿಸಬಹುದು.

**16. ಹಣಕಾಸಿನ ಸಹಾಯ, ವಿದ್ಯುಚ್ಛಕ್ತಿ ಸಂಪರ್ಕ ಮುಂತಾದವುಗಳನ್ನು ಪಡೆಯಲು ಅನರ್ಹತೆ.–** ಅಧಿಸೂಚಿತ ಪ್ರದೇಶದಲ್ಲಿ ಅನುಮತಿ ಪತ್ರವನ್ನು ಹೊಂದಿರದ ಯಾವೊಬ್ಬ ವ್ಯಕ್ತಿಯು,

(ಎ) ಬಾವಿಯನ್ನು ತೋಡುವುದಕ್ಕೆ ಮತ್ತು ಅಂತರ್ಜಲವನ್ನು ತೆಗೆಯುವುದಕ್ಕೆ ಸರ್ಕಾರದಿಂದ ಅಥವಾ ಯಾವುದೇ ಇತರ ಏಜೆನ್ಸಿಯಿಂದ, ಸಂಘದಿಂದ ಅಥವಾ ಹಣಕಾಸು ಸಂಸ್ಥೆಯಿಂದ ಯಾವುದೇ ಸಹಾಯಧನ, ಅನುದಾನ ಅಥವಾ ಸಾಲವನ್ನು ಪಡೆಯಲು;

(ಬಿ) ಅನುಮತಿಪತ್ರವನ್ನು ಪಡೆಯದೆ ಬಾವಿಯಿಂದ ನೀರೆತ್ತುವುದಕ್ಕೆ ವಿದ್ಯುಚ್ಛಕ್ತಿ ಸರಬರಾಜನ್ನು, ವಿದ್ಯುತ್ ಸರಬರಾಜು ಕಂಪನಿಯಿಂದ ಅಥವಾ ಯಾವುದೇ ಇತರ ಪ್ರಾಧಿಕಾರದಿಂದ ಪಡೆಯಲು;

(ಸಿ) ರೈತನಾಗಿರುವವನು ಮತ್ತು ಅಧಿಸೂಚಿತ ಪ್ರದೇಶಗಳಲ್ಲಿ ಸಿಂಪರಣೆ ಅಥವಾ ಹನಿ ನೀರಾವರಿ ಸಾಧನೆಗಳನ್ನು ಅಳವಡಿಸಿಕೊಂಡಿರದವನಾಗಿರುವವನು ಸರ್ಕಾರದಿಂದ ಯಾವುದೇ ಸಹಾಯಧನ (ಸಬ್ಸಿಡಿ) ಅಥವಾ ಪ್ರೋತ್ಸಾಹಧನವನ್ನು ಪಡೆಯಲು,

– ಅನರ್ಹನಾಗಿರತಕ್ಕದ್ದು.

**17. ಅಂತರ್ಜಲ ಪ್ರಾಧಿಕಾರದ ಅಧಿಕಾರಗಳು.–** (1) ಪ್ರಾಧಿಕಾರವು ಅಥವಾ ಈ ಬಗ್ಗೆ ಅದರಿಂದ ಲಿಖಿತದ ಅಧಿಕಾರ ಪಡೆದ ಯಾವೊಬ್ಬ ವ್ಯಕ್ತಿಯು ಈ ಮುಂದಿನ ಅಧಿಕಾರಗಳನ್ನು ಹೊಂದಿರತಕ್ಕದ್ದು:–

(ಎ) ಯಾವುದೇ ಸ್ವತ್ತಿನೊಳಕ್ಕೆ ಯಾವುದೇ ಸಮಂಜಸ ಸಮಯದಲ್ಲಿ ಪ್ರವೇಶಿಸುವುದು ಮತ್ತು ಸಂಬಂಧಿಸಿದ ಭೂಮಿಯ ಅಥವಾ ಭೂಮಿಯ ಮೇಲ್ಮೈಯಲ್ಲಿ ಅಥವಾ ಭೂಮಿಯ ಅಂತರಾಳದಲ್ಲಿ ಇರುವ ನೀರಿನ ಪರಿಶೀಲನೆ ಮಾಡುವುದು ಹಾಗೂ ಅದರ ಯಾವುದೇ ಅಳತೆಯನ್ನು ತೆಗೆದುಕೊಳ್ಳುವುದು;

(ಬಿ) ನಿರ್ಮಿಸಲಾದ ಅಥವಾ ಕೊರೆಯಲಾದ ಅಥವಾ ಈಗಾಗಲೇ ಕೊರೆದಿರುವ ಬಾವಿಯನ್ನು ಮತ್ತು ಅದರಿಂದ ಅಗೆದು ತೆಗೆದ ಮಣ್ಣು ಹಾಗೂ ಇತರ ವಸ್ತುಗಳನ್ನು ಪರೀಕ್ಷಿಸುವುದು;

(ಸಿ) ಅಂಥ ಬಾವಿಯಿಂದ ಹೊರತೆಗೆದ ಅಂಥ ಮಣ್ಣಿನ ಅಥವಾ ಇತರ ವಸ್ತುಗಳ ಅಥವಾ ನೀರಿನ ಮಾದರಿಗಳನ್ನು ಪಡೆಯುವುದು;

(ಡಿ) ಬಾವಿಯನ್ನು ಕೊರೆಯುತ್ತಿರುವ ಅಥವಾ ತೋಡುತ್ತಿರುವ ವ್ಯಕ್ತಿಯು ಅದರಿಂದ ತೆಗೆದ ಮಣ್ಣಿನ ಅಥವಾ ಯಾವುವೇ ವಸ್ತುಗಳ ಮಾದರಿಯನ್ನು, ಕೆಲಸವನ್ನು ಪೂರ್ಣಗೊಳಿಸಿದ ಅಥವಾ ಬಿಟ್ಟುಬಿಟ್ಟ ದಿನಾಂಕದಿಂದ ಮೂರು ತಿಂಗಳಿಗೆ ಮೀರದಂಥ ಅವಧಿಯವರೆಗೆ, ನಿಯಮಿಸಲಾದ ರೀತಿಯಲ್ಲಿ ಪ್ರಾಧಿಕಾರವು ನಿರ್ದಿಷ್ಟಪಡಿಸಬಹುದಾದಂತೆ ಇಡಬೇಕೆಂದು ಮತ್ತು ಸಂರಕ್ಷಿಸಬೇಕೆಂದು ಲಿಖಿತ ಆದೇಶ ನೀಡುವುದು ಮತ್ತು ಆ ತರುವಾಯ ಅಂಥ ವ್ಯಕ್ತಿಯು ಹಾಗೆ ಅಗತ್ಯ ಪಡಿಸಿದ್ದನ್ನು ಪಾಲಿಸತಕ್ಕದ್ದು;

(ಇ) ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯಗತಗೊಳಿಸಲು ಸಂಬಂಧಿಸಿದ ದಾಖಲೆ ಅಥವಾ ದಸ್ತಾವೇಜುಗಳ ಪ್ರತಿಗಳನ್ನು ಪರೀಕ್ಷಿಸುವುದು ಮತ್ತು ಪಡೆಯುವುದು ಹಾಗೂ (ಕೊರೆಯುತ್ತಿರುವ ಅಥವಾ ತೋಡುತ್ತಿರುವ ಅಥವಾ ತೋಡಿದ ಬಾವಿಯ ವ್ಯಾಸ ಅಥವಾ ಆಳ, ಎಷ್ಟು ಆಳ ಅಗೆದಾಗ ನೀರು ಸಿಕ್ಕಿತು ಹಾಗೂ ತದನಂತರ ಯಾವ ಆಳಕ್ಕೆ ನೀರು ತುಂಬಿ ನಿಂತಿತು, ಬಾವಿಯನ್ನು ತೋಡುತ್ತಿರುವಾಗ ಸಿಕ್ಕ ವಿವಿಧ ಭೂ ಪದರುಗಳ ಮಾದರಿ ಮತ್ತು ನೀರಿನ ಗುಣಮಟ್ಟ ಇವುಗಳು ಒಳಗೊಂಡಂತೆ) ಯಾವುದೇ ಮಾಹಿತಿಯನ್ನು ಪಡೆಯಲು ಅವಶ್ಯಕವಾದ ಯಾವುದೇ ಪ್ರಶ್ನೆಯನ್ನು ಕೇಳುವುದು ;

(ಎಫ್) ಅಂತರ್ಜಲದ ಯಾವೊಬ್ಬ ಬಳಕೆದಾರನು ಅಥವಾ ಬಾವಿ ಕೊರೆಯುವ ಅಥವಾ ತೋಡುವ ಏಜೆನ್ಸಿಯು ನಿಯಮಿಸಬಹುದಾದಂಥ ಮಾಹಿತಿಯನ್ನು ಅಥವಾ ವರದಿಗಳನ್ನು ಅಂಥ ನಮೂನೆಯಲ್ಲಿ ಅಂಥ ಕಾಲಾಂತರಗಳಲ್ಲಿ ಮತ್ತು ಅಂಥ ವಿವರಗಳೊಂದಿಗೆ ಒದಗಿಸಬೇಕೆಂದು ಅಗತ್ಯಪಡಿಸುವ ಒಂದು ನೋಟೀಸನ್ನು ಜಾರಿ ಮಾಡುವುದು ಅಥವಾ ಜಾರಿ ಮಾಡುವಂತೆ ಮಾಡುವುದು ಮತ್ತು ಹಾಗೆ ಜಾರಿ ಮಾಡಿದಾಗ ಆ ಬಳಕೆದಾರನು ಅಥವಾ ಬಾವಿ ಕೊರೆಯುವ ಅಥವಾ ತೋಡುವ ಏಜೆನ್ಸಿಯು ಅಗತ್ಯ ಪಡಿಸಿದಂಥ ಅಂಶಗಳನ್ನು ಪಾಲಿಸತಕ್ಕದ್ದು;

(ಜಿ) ನೀರಿನ ಬಳಕೆಯ ಆಡಳಿತವನ್ನು ಸರಿಯಾಗಿ ಮಾಡಲು ಅಥವಾ ಅಂತರ್ಜಲ ಬಳಕೆದಾರನು ಈ ಅಧಿನಿಯಮದ ಉಪಬಂಧಗಳನ್ನು ಅಥವಾ ಅದರ ಅಡಿಯಲ್ಲಿ ರಚಿಸಿದ ನಿಯಮಗಳನ್ನು ಪಾಲಿಸುತ್ತಿಲ್ಲ ಎಂದು ನಂಬಲು ಕಾರಣಗಳಿದ್ದರೆ ಅಥವಾ ಯಾವುದೇ ಇತರ ಸೂಕ್ತ ಕಾರಣಗಳಿಗಾಗಿ ಅವಶ್ಯಕವಿದ್ದರೆ ಜಲ ಮಾಪನ ಸಾಧನವನ್ನು ಅಳವಡಿಸುವಂತೆ ಅಂತರ್ಜಲ ಬಳಕೆದಾರನನ್ನು ಅಗತ್ಯಪಡಿಸುವುದು:

ಪರಂತು, ಅಂತರ್ಜಲ ಬಳಕೆದಾರನು ತನಗೆ ನೀಡಿದ ನಿರ್ದೇಶನಗಳನ್ನು ಮೂವತ್ತು ದಿನಗಳ ಅವಧಿಯೊಳಗೆ ಪಾಲಿಸದಿದ್ದಲ್ಲಿ, ಪ್ರಾಧಿಕಾರವು ತಾನಾಗಿಯೇ ಅಂಥ ಜಲ ಮಾಪನ ಸಾಧನವನ್ನು ಅಳವಡಿಸಬಹುದು ಮತ್ತು ಹಾಗೆ ಪಾಲಿಸಲು ತಪ್ಪಿದ ಅಂತರ್ಜಲ ಬಳಕೆದಾರನಿಂದ ವೆಚ್ಚವನ್ನು ವಸೂಲು ಮಾಡಬಹುದು.

(ಎಚ್) ಕಾನೂನುಬಾಹಿರವಾಗಿ ಬಾವಿಯನ್ನು ಕೊರೆಯಲು ಅಥವಾ ತೋಡಲು ಮತ್ತು ಅಂತರ್ಜಲವನ್ನು ತೆಗೆಯಲು ಉಪಯೋಗಿಸಿದ ಯಾವುದೇ ಯಂತ್ರೋಪಕರಣಗಳನ್ನು ಜಪ್ತಿಮಾಡುವುದು ಮತ್ತು ನಿರ್ವಹಿಸಲಾದ ಕಾಮಗಾರಿಯನ್ನು ಭಾಗಶಃ ಅಥವಾ ಪೂರ್ಣವಾಗಿ ನಾಶಪಡಿಸುವುದು.

(ಐ) ಈ ಅಧಿನಿಯಮದ ಉಪಬಂಧಗಳನ್ನು ಮತ್ತು ಅದರ ಅಡಿಯಲ್ಲಿ ರಚಿಸಿದ ನಿಯಮಗಳನ್ನು ಪಾಲಿಸದ ಯಾವೊಬ್ಬ ಅಂತರ್ಜಲ ಬಳಕೆದಾರನನ್ನು ಯಾವುದೇ ಅಂತರ್ಜಲವನ್ನು ಮೇಲೆ ತೆಗೆಯುವುದನ್ನು ನಿಲ್ಲಿಸಬೇಕೆಂದು, ಅದಕ್ಕೆ ವಿದ್ಯುತ್ ಸರಬರಾಜನ್ನು ಕಿತ್ತುಹಾಕಬೇಕೆಂದು ಅಥವಾ ಈ ಅಧಿನಿಯಮದ ಅಥವಾ ಅದರ ಅಡಿಯಲ್ಲಿ ರಚಿಸಿದ ನಿಯಮಗಳ ಮೇರೆಗೆ ಕಾನೂನು ಬಾಹಿರವೆಂದು ಕಂಡುಬಂದ ಯಾವುದೇ ಹೈಡ್ರಾಲಿಕ್ ಕಾಮಗಾರಿಯನ್ನು ವಶಪಡಿಸಿಕೊಳ್ಳಬೇಕೆಂದು ಅಗತ್ಯಪಡಿಸುವುದು:

ಪರಂತು, ಅಂತರ್ಜಲ ಬಳಕೆದಾರನು ತನಗೆ ನೀಡಿದ ನಿರ್ದೇಶನಗಳನ್ನು ಅಂಥ ಕಡ್ಡಾಯ ಕೋರಿಕೆಯನ್ನು ಹೊರಡಿಸಿದ ದಿನಾಂಕದಿಂದ ಅರವತ್ತು ದಿನಗಳ ಅವಧಿಯೊಳಗೆ ಪಾಲಿಸದಿದ್ದಲ್ಲಿ, ಪ್ರಾಧಿಕಾರವು ತಾನಾಗಿಯೇ ಅವಶ್ಯಕ ಕಾಮಗಾರಿಯನ್ನು ಕೈಗೊಳ್ಳಬಹುದು ಮತ್ತು ಕಾನೂನುಬಾಹಿರ ಅಂತರ್ಜಲ ಬಳಕೆದಾರನಿಂದ ಅದರ ವೆಚ್ಚವನ್ನು ವಸೂಲು ಮಾಡಬಹುದು.

(ಜೆ) ಈ ಅಧಿನಿಯಮದ ಅಡಿಯಲ್ಲಿನ ಅಪರಾಧವನ್ನು ಮಾಡಲಾಗಿದೆ ಅಥವಾ ಮಾಡಲಾಗುತ್ತಿದೆ ಎಂದು ತಾನು ನಂಬಲು ಕಾರಣಗಳಿರುವ ಯಾವುದೇ ಸ್ಥಳವನ್ನು ತಾನು ಅವಶ್ಯಕವೆಂದು ಭಾವಿಸಬಹುದಾದಂಥ ನೆರವಿನೊಂದಿಗೆ ಎಲ್ಲಾ ಸೂಕ್ತ ಸಮಯದಲ್ಲಿ ಪ್ರವೇಶಿಸುವುದು ಮತ್ತು ಶೋಧಿಸುವುದು ಮತ್ತು ಅಪರಾಧವನ್ನು ಮಾಡಿದ ಅಥವಾ ಮಾಡುತ್ತಿರುವ ವ್ಯಕ್ತಿಗೆ ಮೂವತ್ತು ದಿನಗಳಿಗೆ ಮೀರದ ಒಂದು ನಿರ್ದಿಷ್ಟ ಅವಧಿಯಲ್ಲಿ ಅಂತರ್ಜಲವನ್ನು ತೆಗೆಯದಂತೆ ಅಥವಾ ಬಳಸದಂತೆ ಲಿಖಿತದಲ್ಲಿ ಆದೇಶಿಸುವುದು;

(ಕೆ) ಈ ಅಧಿನಿಯಮದ ಅಥವಾ ಅದರ ಅಡಿಯಲ್ಲಿ ರಚಿಸಿದ ನಿಯಮಗಳ ಉದ್ದೇಶಗಳನ್ನು ಈಡೇರಿಸುವುದಕ್ಕಾಗಿ ನಿಯಮಿಸಬಹುದಾದ ಅಥವಾ ಅವಶ್ಯಕವಾಗಬಹುದಾದಂಥ ಇತರ ಅಧಿಕಾರಗಳನ್ನು ಚಲಾಯಿಸುವುದು.

(2) (1)ನೇ ಉಪ-ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳು, ಬಾವಿ ಕೊರೆಯುವ ಅಥವಾ ತೋಡುವ ಅಂತರ್ಜಲವನ್ನು ಹೊರತೆಗೆದು ಬಳಸುವ ಕಾರ್ಯವು ನಡೆಯುತ್ತಿರುವಂತಹ ಯಾವುದೇ ಆವರಣದ ಬಾಗಿಲನ್ನು ಮುರಿದು ತೆರೆಸುವ ಅಧಿಕಾರವನ್ನು ಒಳಗೊಂಡಿರುತ್ತದೆ:

ಪರಂತು, ಬಾಗಿಲನ್ನು ಮುರಿದು ತೆರೆಸುವ ಅಧಿಕಾರವನ್ನು, ಆವರಣದ ಮಾಲೀಕ ಅಥವಾ ಆವರಣದಲ್ಲಿ ಅನುಭೋಗ ಹೊಂದಿರುವ ಯಾವೊಬ್ಬ ಇತರೆ ವ್ಯಕ್ತಿಯು, ಒಳಗಡೆ ಹಾಜರಿದ್ದಲ್ಲಿ ಹಾಗೂ ಬಾಗಿಲು ತೆಗೆಯಿರಿ ಎಂದು ಕೇಳಿದಾಗಲೂ ತೆರೆಯಲು ನಿರಾಕರಿಸಿದ್ದಲ್ಲಿ ಮಾತ್ರ ಚಲಾಯಿಸತಕ್ಕದ್ದು.

(3) ದಂಡ ಪ್ರಕ್ರಿಯಾ ಸಂಹಿತೆ, 1973ರ (1974ರ ಕೇಂದ್ರ ಅಧಿನಿಯಮ 2) ಉಪಬಂಧಗಳು ಸಾಧ್ಯವಾದಷ್ಟು ಮಟ್ಟಿಗೆ, ಸದರಿ ಸಂಹಿತೆಯ 93ನೇ ಪ್ರಕರಣದ ಅಡಿಯಲ್ಲಿ ಹೊರಡಿಸಿದ ವಾರಂಟ್ ಪತ್ರದ ಅಡಿಯಲ್ಲಿ ಮಾಡಿದ ಯಾವುದೇ ಶೋಧನೆ ಅಥವಾ ವಶಪಡಿಸಿಕೊಳ್ಳುವಿಕೆಗೆ ಅನ್ವಯಿಸುವ ರೀತಿಯಲ್ಲಿಯೇ ಈ ಪ್ರಕರಣದ ಅಡಿಯಲ್ಲಿನ ಯಾವುದೇ ಶೋಧನೆ ಅಥವಾ ವಶಪಡಿಸಿಕೊಳ್ಳುವುದಕ್ಕೆ ಅನ್ವಯಿಸತಕ್ಕದ್ದು.

(4) ಪ್ರಾಧಿಕಾರವು, (1)ನೇ ಉಪ ಪ್ರಕರಣದ (ಎಚ್) ಖಂಡದ ಅಡಿಯಲ್ಲಿ ಯಾವುದೇ ಯಂತ್ರೋಪಕರಣವನ್ನು ಅಥವಾ ಸಾಧನವನ್ನು ವಶಪಡಿಸಿಕೊಂಡರೆ ಅದು ಆದಷ್ಟು ಬೇಗನೆ, ಆ ಅಪರಾಧದ ವಿಚಾರಣೆ ನಡೆಸಲು ಅಧಿಕಾರ ವ್ಯಾಪ್ತಿಯುಳ್ಳ ಮ್ಯಾಜಿಸ್ಟ್ರೇಟರಿಗೆ ಹಾಗೆ ವಶಪಡಿಸಿಕೊಂಡದ್ದಕ್ಕೆ ಸಂಬಂಧಿಸಿ ಮಾಹಿತಿ ನೀಡತಕ್ಕದ್ದು ಮತ್ತು ಅದರ ಅಭಿರಕ್ಷೆಗಾಗಿ ಅವರ ಆದೇಶವನ್ನು ಪಡೆಯತಕ್ಕದ್ದು.

## ಅಧ್ಯಾಯ – III

## ನಿಧಿಗಳು, ಲೆಕ್ಕಪತ್ರಗಳು ಮತ್ತು ಲೆಕ್ಕ ಪರಿಶೋಧನೆ

**18. ಪ್ರಾಧಿಕಾರದ ನಿಧಿಗಳು.**– (1) ಪ್ರಾಧಿಕಾರವು, ಕರ್ನಾಟಕ ಅಂತರ್ಜಲ ನಿಧಿ ಎಂದು ಕರೆಯಲಾಗುವ ಒಂದು ಪ್ರತ್ಯೇಕ ನಿಧಿಯನ್ನು ಹೊಂದಿರತಕ್ಕದ್ದು ಮತ್ತು ನಿರ್ವಹಿಸಿಕೊಂಡು ಬರತಕ್ಕದ್ದು, ಹಾಗೂ ಅದಕ್ಕೆ ಈ ಮುಂದಿನದನ್ನು ಜಮೆ ಮಾಡತಕ್ಕದ್ದು,–

(ಎ) ಸರ್ಕಾರದಿಂದ ಕಾಲಕಾಲಕ್ಕೆ ಅನುದಾನ ಅಥವಾ ಸಾಲದ ರೂಪದಲ್ಲಿ ಅಥವಾ ಅನ್ಯಥಾ ಪ್ರಾಧಿಕಾರದ, ವಿಲೆ ಸುಫರ್ದಿಯಲ್ಲಿರಸಲಾದ ಅಂಥ ಮೊಬಲಗು;

(ಬಿ) ಕೇಂದ್ರ ಸರ್ಕಾರದಿಂದ ಸ್ವೀಕರಿಸಿದ ಅನುದಾನಗಳು ಮತ್ತು ಸಾಲಗಳು;

(ಸಿ) ಹಣಕಾಸು ಏಜೆನ್ಸಿಗಳಿಂದ ಪ್ರಾಧಿಕಾರವು ಸರ್ಕಾರದ ಪೂರ್ವಸಹಮತಿ ಪಡೆದು ಎತ್ತಿದ ಸಾಲಗಳು;

(ಡಿ) ವಿಧಿಸಲಾದ ಯಾವುದೇ ಶುಲ್ಕಗಳು, ವೆಚ್ಚಗಳು ಮತ್ತು ಜುಲ್ಮಾನೆಗಳ ಮೂಲಕ ಬಂದ ವರಮಾನ;

(ಇ) ಇತರ ಯಾವುದೇ ಮೂಲಗಳಿಂದ ಪ್ರಾಧಿಕಾರವು ಸ್ವೀಕರಿಸಿದಂಥ ಇತರ ಮೊಬಲಗು;

(2) ಪ್ರಾಧಿಕಾರದ ಸಿಬ್ಬಂದಿಗೆ ವೇತನದ ಸೂಕ್ತ ಶ್ರೇಣಿಯೊಂದಿಗೆ ತಾತ್ಕಾಲಿಕವಾಗಿ ಅಥವಾ ಖಾಯಂ ಆಗಿ ಮಾಡುವ ಎಲ್ಲಾ ಹೊಸ ನೇಮಕಾತಿಗಳನ್ನು ಮತ್ತು ಹೊಸ ವಾಹನಗಳ ಖರೀದಿಗಳನ್ನು ಸರ್ಕಾರದ ಸಹಮತಿ ಪಡೆದು ಮಾಡತಕ್ಕದ್ದು;

(3) ಪ್ರಾಧಿಕಾರವು, ಸರ್ಕಾರದ ಅನುಮೋದನೆಯೊಂದಿಗೆ ಕೈಗಾರಿಕೆ, ವಾಣಿಜ್ಯ ಮತ್ತು ಮನೋರಂಜನೆ ಉದ್ದೇಶಗಳಿಗಾಗಿ ತೆಗೆಯಲಾದ ಅಂತರ್ಜಲದ ಪ್ರಮಾಣದ ಮೇಲೆ ನಿಯಮಿಸಬಹುದಾದಂಥ ರೀತಿಯಲ್ಲಿ ಸೂಕ್ತ ದರಗಳನ್ನು ವಿಧಿಸಬಹುದು.

(4) ನಿಧಿಯನ್ನು ನಿಯಮಿಸಬಹುದಾದಂಥ ರೀತಿಯಲ್ಲಿ, ಅಧಿನಿಯಮನದ ಉದ್ದೇಶಗಳಿಗಾಗಿ ವಿನಿಯೋಗಿಸತಕ್ಕದ್ದು.

(5) ನಿಧಿಯನ್ನು ನಿಯಮಿಸಬಹುದಾದಂಥ ರೀತಿಯಲ್ಲಿ ಠೇವಣಿ ಇಡತಕ್ಕದ್ದು ಮತ್ತು ಅಂಥ ರೀತಿಯಲ್ಲಿ ಹಣ ತೆಗೆಯತಕ್ಕದ್ದು.

**19. ಪ್ರಾಧಿಕಾರದ ಬಜೆಟ್.**– ಪ್ರಾಧಿಕಾರವು, ಪ್ರತಿವರ್ಷವು ನಿಯಮಿಸಬಹುದಾದಂಥ ನಮೂನೆಯಲ್ಲಿ ಮತ್ತು ಅಂಥ ಕಾಲದಲ್ಲಿ, ಅಧಿನಿಯಮದ ಆಡಳಿತದ ಸಂಬಂಧದಲ್ಲಿ ಮುಂದಿನ ಆರ್ಥಿಕ ವರ್ಷಕ್ಕಾಗಿ ಪ್ರಾಧಿಕಾರದ ಅಂದಾಜು ಸ್ವೀಕೃತಿಗಳು ಮತ್ತು ವೆಚ್ಚಗಳನ್ನು ತೋರಿಸುವ ಒಂದು ಬಜೆಟ್ ಸಿದ್ಧಪಡಿಸತಕ್ಕದ್ದು ಮತ್ತು ನಿಯಮಿಸಬಹುದಾದಂಥ ಸಂಖ್ಯೆಯ ಅದರ ಪ್ರತಿಗಳನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

**20. ಲೆಕ್ಕಪತ್ರಗಳು ಮತ್ತು ಲೆಕ್ಕ ಪರಿಶೋಧನೆ.–** (1) ಪ್ರಾಧಿಕಾರವು, ನಿಜವಾದ ಮತ್ತು ಸರಿಯಾದ ಲೆಕ್ಕಪತ್ರಗಳನ್ನು ಮತ್ತು ಸಂಬಂಧಪಟ್ಟ ಇತರ ದಾಖಲೆಗಳನ್ನು ಇಡತಕ್ಕದ್ದು ಮತ್ತು ನಿಯಮಿಸಬಹುದಾದಂಥ ನಮೂನೆಯಲ್ಲಿ ಜಮಾ ಖರ್ಚುಪಟ್ಟಿಯೂ ಸೇರಿದಂತೆ ವಾರ್ಷಿಕ ಲೆಕ್ಕಪತ್ರ ವಿವರಪಟ್ಟಿಯನ್ನು ಸಿದ್ಧಪಡಿಸತಕ್ಕದ್ದು.

(2) ಪ್ರಾಧಿಕಾರದ ಲೆಕ್ಕಪತ್ರಗಳನ್ನು, ರಾಜ್ಯ ಲೆಕ್ಕಪತ್ರ ನಿಯಂತ್ರಕರು ಪ್ರತಿವರ್ಷ ಲೆಕ್ಕ ಪರಿಶೋಧನೆ ಮಾಡತಕ್ಕದ್ದು ಮತ್ತು ವಾರ್ಷಿಕ ಲೆಕ್ಕಪತ್ರ ವಿವರಪಟ್ಟಿಯ ಪ್ರತಿಯನ್ನು ಲೆಕ್ಕ ಪರಿಶೋಧಕರ ವರದಿ ಪ್ರತಿಯೊಂದಿಗೆ ಪ್ರತಿವರ್ಷ ಸರ್ಕಾರಕ್ಕೆ ಕಳುಹಿಸತಕ್ಕದ್ದು.

**21. ವಾರ್ಷಿಕ ವರದಿ.–** ಪ್ರಾಧಿಕಾರವು, ವರ್ಷದ ಕಾರ್ಯಕಲಾಪಗಳ ವರದಿಯನ್ನು ಪ್ರತಿವರ್ಷವೂ ಸಿದ್ಧಪಡಿಸತಕ್ಕದ್ದು ಮತ್ತು ಸರ್ಕಾರಕ್ಕೆ ಆ ವರದಿಯನ್ನು ನಿಯಮಿಸಬಹುದಾದಂಥ ರೀತಿಯಲ್ಲಿ ಅಂಥ ದಿನಾಂಕದಂದು ಅಥವಾ ಅದಕ್ಕೂ ಮೊದಲೇ ಸಲ್ಲಿಸತಕ್ಕದ್ದು ಮತ್ತು ಸರ್ಕಾರವು ಅದನ್ನು ರಾಜ್ಯ ವಿಧಾನ ಮಂಡಲದ ಪ್ರತಿಯೊಂದು ಸದನದ ಮುಂದೆ ಇರಿಸುವಂತೆ ಮಾಡತಕ್ಕದ್ದು.

## ಅಧ್ಯಾಯ – IV

## ಮಳೆ ನೀರಿನ ಕೊಯ್ಲು

**22. ಅಂತರ್ಜಲದ ಮರುಪೂರಣಕ್ಕೆ ಮಳೆನೀರಿನ ಕೊಯ್ಲು.–** (1) ಅಂತರ್ಜಲದ ಪರಿಸ್ಥಿತಿಯನ್ನು ಸುಧಾರಿಸಲು, ಪ್ರಾಧಿಕಾರವು, ರಾಜ್ಯದಲ್ಲಿ ಮರುಪೂರಣಕ್ಕೆ ಯೋಗ್ಯವಾದ ಪ್ರದೇಶಗಳನ್ನು ಗುರುತಿಸತಕ್ಕದ್ದು. ಪ್ರಾಧಿಕಾರವು, ಗ್ರಾಮೀಣ ಪ್ರದೇಶಗಳಲ್ಲಿ ಸಮುದಾಯದ ಭಾಗವಹಿಸುವಿಕೆಯ ಮೂಲಕ ಅಂತರ್ಜಲ ಮರುಪೂರಣಕ್ಕೆ ಅನುಕೂಲ ಮಾಡಿಕೊಡುವಂತೆ ಜಲವಿಭಾಜಕ ಪ್ರದೇಶ ನಿರ್ವಹಣೆಯನ್ನು ಪ್ರೋತ್ಸಾಹಿಸತಕ್ಕದ್ದು.

(2) ಪ್ರಾಧಿಕಾರವು, ಸರ್ಕಾರದ ಸಂಬಂಧಪಟ್ಟ ಇಲಾಖೆಗಳಿಗೆ, ಅಧಿಸೂಚಿತ ಪ್ರದೇಶಗಳ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಅಭಿವೃದ್ಧಿ ಸ್ಕೀಮುಗಳಲ್ಲಿ ಮಳೆನೀರಿನ ಕೊಯ್ಲನ್ನು ಸೇರಿಸಬೇಕೆಂಬ ಸೂಕ್ತ ನಿರ್ದೇಶನಗಳನ್ನು ನೀಡತಕ್ಕದ್ದು.

(3) ಅಧಿಸೂಚಿತ ಪ್ರದೇಶಗಳಡಿಯಲ್ಲಿನ ಪಟ್ಟಣ ಪ್ರದೇಶಗಳಲ್ಲಿ, ಪ್ರಾಧಿಕಾರವು, ನಿಯಮಿಸಲಾದ ರೀತಿಯಲ್ಲಿ, 100 ಚದರ ಮೀಟರು ಅಥವಾ ಅದಕ್ಕೂ ಹೆಚ್ಚು ವಿಸ್ತಾರವಿರುವ ಎಲ್ಲಾ ವಾಸಸ್ಥಳ, ವಾಣಿಜ್ಯ ಮತ್ತು ಇತರ ಆವರಣಗಳಲ್ಲಿ ಮಳೆ ನೀರಿನ ಕೊಯ್ಲಿನ ಸೂಕ್ತ ರಚನೆಗಳನ್ನು ಕಟ್ಟಬೇಕೆಂದು ನಿರ್ದೇಶನಗಳನ್ನು ನೀಡತಕ್ಕದ್ದು.

(4) ಸಂಬಂಧಿಸಿದದ ಕಾನೂನುಗಳಲ್ಲಿ ಏನೇ ಇದ್ದರೂ, ಪೌರನಿಗಮ ಅಥವಾ ಸಂದರ್ಭಾನುಸಾರ ಯಾವುದೇ ಇತರ ಸ್ಥಳೀಯ ಪ್ರಾಧಿಕಾರವು 100 ಚದರ ಮೀಟರುಗಳ ಪ್ರದೇಶ ಅಥವಾ ಅದಕ್ಕೂ ಹೆಚ್ಚಿನ ಪ್ರದೇಶದಲ್ಲಿ ನಿರ್ಮಿಸುವ ಕಟ್ಟಡದ ನಿರ್ಮಾಣಕ್ಕೆ ಅನುಮೋದನೆಯನ್ನು ನೀಡುವ ಸಂದರ್ಭದಲ್ಲಿ ಕಟ್ಟಡ ನಕಾಶೆಯಲ್ಲಿ ಮೇಲ್ಛಾವಣಿಯಲ್ಲಿ ಬೀಳುವ ಮಳೆ ನೀರಿನ ಕೊಯ್ಲಿಗೆ ಬೇಕಾದ ನಿರ್ಮಿತಿಗಳನ್ನು ಒದಗಿಸುವಂತೆ ಷರತ್ತನ್ನು ವಿಧಿಸತಕ್ಕದ್ದು ಹಾಗೂ ಈ ಸಂಬಂಧದಲ್ಲಿ ನೀಡಿದ ನಿರ್ದೇಶನಗಳನ್ನು ಪಾಲಿಸಿದ ತರುವಾಯ ನೀರು ಮತ್ತು ವಿದ್ಯುತ್ ಖಾಯಂ ಸಂಪರ್ಕಗಳನ್ನು ಒದಗಿಸತಕ್ಕದ್ದು.

(5) ಪ್ರಾಧಿಕಾರವು, ಮಳೆ ನೀರಿನ ಕೊಯ್ಲು ಮತ್ತು ಅಂತರ್ಜಲದ ಕೃತಕ ಮರುಪೂರಣದ ಬಗ್ಗೆ ಸರ್ಕಾರದ ಏಜೆನ್ಸಿಗಳು/ ಸರ್ಕಾರೇತರ ಸಂಘಗಳು (ಎನ್‌ಜಿಓಗಳು) ಸ್ವಯಂಸೇವಾ ಸಂಸ್ಥೆಗಳು (ವಿಓಗಳು) / ವಿದ್ಯಾ ಸಂಸ್ಥೆಗಳು / ಕೈಗಾರಿಕೆಗಳು / ಕಾರ್ಯಕರ್ತ ವ್ಯಕ್ತಿಗಳ ಮೂಲಕ ಸಮೂಹ ಅರಿವನ್ನು ಮತ್ತು ತರಬೇತಿ ಕಾರ್ಯಕ್ರಮಗಳನ್ನು ಉತ್ತೇಜಿಸಲು ಕ್ರಮಗಳನ್ನು ತೆಗೆದುಕೊಳ್ಳತಕ್ಕದ್ದು.

(6) ಪ್ರಾಧಿಕಾರವು ನೀರು ಸಂರಕ್ಷಣೆ ಮತ್ತು ಮಳೆನೀರು ಕೊಯ್ಲು/ಮರುಭರ್ತಿ ಯೋಜನೆಗಳನ್ನು ಅನುಸರಿಸುತ್ತಿರುವ ರೈತರಿಗ ಪ್ರೋತ್ಸಾಹಕಗಳು/ಸಹಾಯಧನವನ್ನು ವಿಸ್ತರಿಸುವುದಕ್ಕೆ ಕ್ರಮಗಳನ್ನು ಕೈಗೊಳ್ಳತಕ್ಕದ್ದು.

## ಅಧ್ಯಾಯ – V

## ಸಂಕೀರ್ಣ

**23. ಅಧಿಕಾರ ಮತ್ತು ಕರ್ತವ್ಯಗಳ ಪ್ರತ್ಯಾಯೋಜನೆ.–** ಪ್ರಾಧಿಕಾರವು, ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ಮತ್ತು ಅಂಥ ಷರತ್ತುಗಳಿಗೆ ಮತ್ತು ನಿಬಂಧನೆಗಳಿಗೆ ಒಳಪಟ್ಟು ಈ ಅಧಿನಿಯಮದ ಅಡಿಯಲ್ಲಿನ ಎಲ್ಲಾ ಅಥವಾ ಯಾವುವೇ ಅಧಿಕಾರಗಳನ್ನು ಅಂಥ ಆದೇಶದಲ್ಲಿ ಈ ಸಂಬಂಧದಲ್ಲಿ ನಿರ್ದಿಷ್ಟಪಡಿಸಬಹುದಾದಂಥ, ಅದರ ಯಾರೇ ಅಧಿಕಾರಿಗಳು ಮತ್ತು ನೌಕರರು ಅಥವಾ ಅಂಥ ಇತರ ಅಧಿಕಾರಿಗಳು ಸಹ ಚಲಾಯಿಸಬಹುದೆಂದು ನಿರ್ದೇಶಿಸಬಹುದು.

**24. ಅಧಿನಿಯಮದ ಉಲ್ಲಂಘನೆಗೆ ಸಂಬಂಧಪಟ್ಟ ಮಾಹಿತಿಯನ್ನು ಸಾರ್ವಜನಿಕರು ನೀಡುವುದು.–** (1) ಈ ಅಧಿನಿಯಮದ ಯಾವುವೇ ಉಪಬಂಧಗಳ ಉಲ್ಲಂಘನೆಯಾಗಿವೆ ಎಂದು ಅರಿತ ಯಾವೊಬ್ಬ ವ್ಯಕ್ತಿಯು ಆ ಬಗ್ಗೆ ಪ್ರಾಧಿಕರಕ್ಕೆ ಬರೆದು ತಿಳಿಸಬಹುದು.

(2) ಅಂಥ ಮಾಹಿತಿಯನ್ನು ಸ್ವೀಕರಿಸಿದ ಮೇಲೆ, ಪ್ರಾಧಿಕಾರವು ವಿಚಾರಣೆ ನಡೆಸಿ ಅಂಥ ಉಲ್ಲಂಘನೆಗೆ ಸಂಬಂಧಪಟ್ಟಂತೆ ಈ ಅಧಿನಿಯಮದ ಅಡಿಯಲ್ಲಿ ಕ್ರಮಕೈಗೊಳ್ಳಬಹುದು.

**25. ಭೂ-ಕಂದಾಯದ ಬಾಕಿಯಂತೆ ಬಾಕಿಗಳ ವಸೂಲಿ.**- ಪ್ರಾಧಿಕಾರಕ್ಕೆ ಬರಬೇಕಾದ ಯಾವುದೇ ಮೊತ್ತವನ್ನು ಅದರ ಸಂದಾಯಕ್ಕಾಗಿ ನಿಗದಿಪಡಿಸಲಾದ ಕಾಲದೊಳಗೆ ಸಂದಾಯ ಮಾಡದಿದ್ದಾಗಲೆಲ್ಲಾ ಅದನ್ನು ನಿಯಮಿಸಬಹುದಾದಂಥ ದರಗಳ, ಬಡ್ಡಿಯೊಂದಿಗೆ ಭೂ-ಕಂದಾಯದ ಬಾಕಿಗಳಂತೆ ವಸೂಲಿ ಮಾಡತಕ್ಕದ್ದು.

**26. ಮಾಹಿತಿ ಮತ್ತು ವಿವರ ಪತ್ರಗಳ ಪ್ರಕಟಣೆಯ ಮೇಲೆ ನಿರ್ಬಂಧ.**- ಅಂತರ್ಜಲದ ಯಾವೊಬ್ಬ ಬಳಕೆದಾರನು, 17ನೇ ಪ್ರಕರಣದ (1)ನೇ ಉಪಪ್ರಕರಣದ (ಸಿ) ಖಂಡದ ಅಡಿಯಲ್ಲಿ ತೆಗೆದುಕೊಂಡ ಯಾವುದೇ ಮಾದರಿಯನ್ನು ಆ ಪ್ರಕರಣದ (1)ನೇ ಉಪ-ಪ್ರಕರಣದ (ಎಫ್) ಖಂಡದ ಅಡಿಯಲ್ಲಿ ಅವನು ಒದಗಿಸಿದ ಯಾವುದೇ ಇತರ ಮಾಹಿತಿ ಅಥವಾ ವಿವರ ಪತ್ರವನ್ನು ರಹಸ್ಯವೆಂದು ಪರಿಗಣಿಸಲು ಪ್ರಾಧಿಕಾರಕ್ಕೆ ಲಿಖಿತ ಸೂಚನೆಯನ್ನು ನೀಡಬಹುದು ಮತ್ತು ಆಗ ಪ್ರಾಧಿಕಾರವು, (ರಾಜ್ಯ ಸರ್ಕಾರದ ಅಧಿಕಾರಿಯಲ್ಲದ) ಯಾವ ವ್ಯಕ್ತಿಗೂ ಆ ಮಾದರಿ ಅಥವಾ ಇತರ ಮಾಹಿತಿಯನ್ನು ಅಥವಾ ವಿವರ ಪತ್ರವನ್ನು, ಅದರಲ್ಲಿ ಜಲಸಂಪನ್ಮೂಲ ಮತ್ತು ನೀರಿನ ಸರಬರಾಜು ಮತ್ತು ಭೂವೈಜ್ಞಾನಿಕ, ಸ್ಥಿತಿಗತಿ ಕುರಿತು ಮಾಹಿತಿ ಒಳಗೊಂಡಿರುವಷ್ಟರ ಮಟ್ಟಿಗೆ ಹೊರತು ಪ್ರಕಟಪಡಿಸಲು ಅಥವಾ ತೋರಿಸಲು, ನೋಟೀಸು ನೀಡಿದ ವ್ಯಕ್ತಿಯು ಅದಕ್ಕೆ ಅನುಮತಿ ನೀಡದೇ, ಅವಕಾಶ ನೀಡತಕ್ಕದ್ದಲ್ಲ.

**27. ಆದೇಶಗಳ ಜಾರಿ.**- (1) 17ನೇ ಪ್ರಕರಣದ (1)ನೇ ಉಪ-ಪ್ರಕರಣದ (ಡಿ) ಖಂಡದ ಅಡಿಯಲ್ಲಿನ ಪ್ರತಿಯೊಂದು ಆದೇಶ ಮತ್ತು ಆ ಪ್ರಕರಣದ (1)ನೇ ಉಪ-ಪ್ರಕರಣದ (ಎಫ್) ಖಂಡದ ಅಡಿಯಲ್ಲಿನ ಪ್ರತಿಯೊಂದು ನೋಟೀಸನ್ನು ಯಾವ ಹೆಸರಿಗೆ ವಿಳಾಸ ಬರೆದು ನೀಡಲಾಗಿದೆಯೋ ಆ ಯಾವೊಬ್ಬ ವ್ಯಕ್ತಿಗೆ ಅದರ ಜಾರಿಯನ್ನು,-

(ಎ) ಸದರಿ ಆದೇಶದ ಅಥವಾ ನೋಟೀಸಿನ ಒಂದು ಪ್ರತಿಯನ್ನು ಅಂಥ ವ್ಯಕ್ತಿಗೆ ಕೊಡುವ ಅಥವಾ ಸಲ್ಲಿಸುವ ಮೂಲಕ; ಅಥವಾ

(ಬಿ) ಅಂಥ ವ್ಯಕ್ತಿಯು ಕಾಣ ಸಿಗದಿದ್ದಲ್ಲಿ, ಆದೇಶದ ಅಥವಾ ನೋಟೀಸಿನ ಒಂದು ಪ್ರತಿಯನ್ನು ತಿಳಿದು ಬಂದ ಅವನ ಕೊನೆಯ ವಾಸ ಸ್ಥಳದ ಅಥವಾ ವ್ಯವಹಾರ ನಡೆಸುತ್ತಿದ್ದ ಸ್ಥಳದ ಯಾವುದೇ ಎದ್ದು ಕಾಣುವ ಭಾಗಕ್ಕೆ ಅಂಟಿಸುವ ಮೂಲಕ ಅಥವಾ ಆದೇಶ ಅಥವಾ ನೋಟೀಸನ್ನು ಅವನ ಕುಟುಂಬದ ವಯಸ್ಕ ಪುರುಷ ಸದಸ್ಯ ಅಥವಾ ಸೇವಕನಿಗೆ ವಶಾವಣೆ ಮಾಡುವ ಮೂಲಕ ಅಥವಾ ಒಪ್ಪಿಸುವ ಮೂಲಕ ಅಥವಾ ಬಾವಿಯನ್ನು ಕೊರೆಯಲಾಗುತ್ತಿರುವ ಅಥವಾ ತೋಡಲಾಗುತ್ತಿರುವ ಜಮೀನು ಅಥವಾ ಕಟ್ಟಡದ ಯಾವುದೇ ಎದ್ದುಕಾಣುವ ಭಾಗದ ಮೇಲೆ ಅಂಟಿಸುವಂತೆ ಮಾಡುವ ಮೂಲಕ

- ಜಾರಿಗೊಳಿಸತಕ್ಕದ್ದು.

(2) ಆದೇಶ ಅಥವಾ ನೋಟೀಸನ್ನು ಯಾರ ಮೇಲೆ ಜಾರಿಗೊಳಿಸಬೇಕಾಗಿದೆಯೋ ಆ ವ್ಯಕ್ತಿಯು ಒಬ್ಬ ಅಪ್ರಾಪ್ತ ವಯಸ್ಕನಾಗಿದ್ದಲ್ಲಿ, (1)ನೇ ಉಪ-ಪ್ರಕರಣದಲ್ಲಿ ಉಪಬಂಧಿಸಲಾದ ರೀತಿಯಲ್ಲಿ ಅವನ ಪೋಷಕನ ಮೇಲೆ ಜಾರಿಗೊಳಿಸಿದರೆ ಅದನ್ನು ಅಪ್ರಾಪ್ತ ವಯಸ್ಕನಿಗೇ ಜಾರಿಗೊಳಿಸಲಾಗಿದೆ ಎಂಬುದಾಗಿ ಭಾವಿಸತಕ್ಕದ್ದು.

**28. ಪರಿಹಾರವನ್ನು ಕ್ಲೇಮು ಮಾಡಲು ನಿಷೇಧ.**- ಕೈಗೊಂಡ ಯಾವುದೇ ಕ್ರಮದಿಂದಾಗಿ ತನಗೆ ಉಂಟಾದ ಯಾವುದೇ ಹಾನಿ ಕುರಿತು ಯಾವ ವ್ಯಕ್ತಿಯೂ ಸರ್ಕಾರದಿಂದ ನಷ್ಟ ಭರ್ತಿಯನ್ನು ಅಥವಾ ಪರಿಹಾರವನ್ನು ಕ್ಲೇಮು ಮಾಡಲು ಹಕ್ಕುಳ್ಳವನಾಗಿರತಕ್ಕದ್ದಲ್ಲ.

**29. ಪ್ರಾಧಿಕಾರದ ಸದಸ್ಯರು ಮತ್ತು ನೌಕರರು ಸಾರ್ವಜನಿಕ ನೌಕರರಾಗಿರುವುದು.**- ಪ್ರಾಧಿಕಾರದ ಎಲ್ಲಾ ಸದಸ್ಯರು ಮತ್ತು ನೌಕರರು, ಈ ಅಧಿನಿಯಮದ ಉಪಬಂಧಗಳನ್ನು ಅಥವಾ ಅದರಡಿಯಲ್ಲಿ ರಚಿಸಿದ ಯಾವವೇ ನಿಯಮಗಳನ್ನು ಅನುಸರಿಸಿ ಕಾರ್ಯನಿರ್ವಹಿಸುತ್ತಿರುವಾಗ ಅಥವಾ ಕಾರ್ಯನಿರ್ವಹಿಸುತ್ತಿದ್ದಾರೆಂದು ತಾತ್ಪರ್ಯವಾದಾಗ ಅವರು ಭಾರತದಂಡ ಸಂಹಿತೆ, 1860ರ 21ನೇ ಪ್ರಕರಣದ ಅರ್ಥ ವ್ಯಾಪ್ತಿಯಲ್ಲಿ ಸಾರ್ವಜನಿಕ ನೌಕರರೆಂದು ಭಾವಿಸತಕ್ಕದ್ದು.

**30. ಸದ್ಭಾವನೆಯಿಂದ ಕೈಗೊಂಡ ಕ್ರಮಕ್ಕೆ ರಕ್ಷಣೆ.**- ಈ ಅಧಿನಿಯಮದ ಅಡಿಯಲ್ಲಿ ಅಥವಾ ಅದರ ಅಡಿಯಲ್ಲಿ ರಚಿಸಲಾದ ಯಾವುದೇ ನಿಯಮದ ಅಡಿಯಲ್ಲಿ ಸದ್ಭಾವನೆಯಿಂದ ಕೈಗೊಂಡ ಅಥವಾ ಕೈಗೊಳ್ಳಲು ಉದ್ದೇಶಿಸಿದ ಯಾವುದೇ ಕ್ರಮಕ್ಕಾಗಿ ಸರ್ಕಾರದ, ಪ್ರಾಧಿಕಾರದ, ಪ್ರಾಧಿಕಾರದ ಅಧ್ಯಕ್ಷರ ಅಥವಾ ಇತರ ಸದಸ್ಯರ ಅಥವಾ ಸರ್ಕಾರದ ಯಾವೊಬ್ಬ ಇತರ ಅಧಿಕಾರಿಯ ಅಥವಾ ಪ್ರಾಧಿಕಾರದ ಯಾವೊಬ್ಬ ಅಧಿಕಾರಿ ಅಥವಾ ಇತರ ನೌಕರನ ವಿರುದ್ಧ ದಾವೆ, ಅಭಿಯೋಜನೆ ಅಥವಾ ಇತರ ಕಾನೂನು ವ್ಯವಹರಣೆಯನ್ನು ಹೂಡಲು ಅವಕಾಶ ಇರತಕ್ಕದ್ದಲ್ಲ.

**31. ಅಪರಾಧಗಳ ಸಂಜ್ಞಾನ ಮತ್ತು ಅಧಿವಿಚಾರಣೆ.**- (1) ಈ ಅಧಿನಿಯಮದ ಅಡಿಯಲ್ಲಿ ದಂಡನೀಯವಾದ ಯಾವುದೇ ಅಪರಾಧದ ಸಂಜ್ಞಾನವನ್ನು, ಈ ಸಂಬಂಧದಲ್ಲಿ ಪ್ರಾಧಿಕಾರವು ಅಧಿಕಾರ ನೀಡಬಹುದಾದಂಥ ಅಧಿಕಾರಿಯು, ಪ್ರಾಧಿಕಾರದ ಪೂರ್ವ ಮಂಜೂರಾತಿ ಪಡೆದು ನೀಡಿದ ಫಿರ್ಯಾದಿನ ಮೇಲೆ ಹೊರತು, ಯಾವುದೇ ನ್ಯಾಯಾಲಯವು ತೆಗೆದುಕೊಳ್ಳತಕ್ಕದ್ದಲ್ಲ.

(2) ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್ ಅಥವಾ ಪ್ರಥಮದರ್ಜೆ ನ್ಯಾಯಿಕ ಮ್ಯಾಜಿಸ್ಟ್ರೇಟ್ ನ್ಯಾಯಾಲಯದ ದರ್ಜೆಗಿಂತ ಕಡಿಮೆ ದರ್ಜೆಯ ಯಾವ ನ್ಯಾಯಾಲಯವೂ ಈ ಅಧಿನಿಯಮದ ಅಡಿಯಲ್ಲಿನ ಯಾವುದೇ ಅಪರಾಧದ ವಿಚಾರಣೆ ನಡೆಸತಕ್ಕದ್ದಲ್ಲ.

**32. ಅಪರಾಧಗಳು ಮತ್ತು ದಂಡಗಳು.**- (1) ಯಾವೊಬ್ಬ ಅಂತರ್ಜಲದ ಬಳಕೆದಾರನು ಅಥವಾ ಬಾವಿ ಕೊರೆಯುವ/ತೋಡುವ ಏಜೆನ್ಸಿಯು,-

(ಎ) ಪ್ರಾಧಿಕಾರಕ್ಕೆ ಅಥವಾ ಅದರಿಂದ ಅಧಿಕಾರ ಪಡೆದ ಯಾವೊಬ್ಬ ಇತರ ವ್ಯಕ್ತಿಗೆ ಈ ಅಧಿನಿಯಮದ ಅಡಿಯಲ್ಲಿನ ಯಾವುದೇ ಅಧಿಕಾರಗಳನ್ನು ಚಲಾಯಿಸಲು ಅಡ್ಡಿಪಡಿಸಿದರೆ, ಅಥವಾ

(ಬಿ) 17ನೇ ಪ್ರಕರಣದ (1)ನೇ ಉಪ-ಪ್ರಕರಣದ (ಎಫ್) ಖಂಡದ ಅಡಿಯಲ್ಲಿ ಯಾವುದೇ ಮಾಹಿತಿ ಅಥವಾ ವಿವರ ಪತ್ರವನ್ನು ಒದಗಿಸಲು ಅಗತ್ಯಪಡಿಸಲಾಗಿದ್ದು,-

(i) ಅಂಥ ಮಾಹಿತಿ ಅಥವಾ ವಿವರಪತ್ರವನ್ನು ಒದಗಿಸಲು ಉದ್ದೇಶ ಪೂರ್ವಕವಾಗಿ ನಿರಾಕರಿಸಿದರೆ ಅಥವಾ ಕಾನೂನು ಬದ್ಧ ಕಾರಣವಿಲ್ಲದೇ ಉಪೇಕ್ಷಿಸಿದರೆ ; ಅಥವಾ

(ii) ಯಾವುದೇ ಮಾಹಿತಿ ಅಥವಾ ವಿವರ ಪತ್ರವನ್ನು ಅದು ಸುಳ್ಳು ಎಂಬುದಾಗಿ ತಿಳಿದೂ ಉದ್ದೇಶ ಪೂರ್ವಕವಾಗಿ ಒದಗಿಸಿದರೆ ಅಥವಾ ಒದಗಿಸಲು ಕಾರಣನಾದರೆ ;

– ಐದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಗೆ ಮತ್ತು / ಅಥವಾ ಆರು ತಿಂಗಳುಗಳ ಅವಧಿಗೆ ವಿಸ್ತರಿಸಬಹುದಾದ ಕಾರಾವಾಸ ಶಿಕ್ಷೆಗೆ ಅಥವಾ ಅವೆರಡಕ್ಕೂ ಗುರಿಯಾಗತಕ್ಕದ್ದು. ಉಲ್ಲಂಘನೆಯು ಮುಂದುವರಿದ ಸಂದರ್ಭದಲ್ಲಿ ಮತ್ತು ತರುವಾಯದ ವಿಫಲತೆ ಅಥವಾ ಉಲ್ಲಂಘನೆಯ ಸಂದರ್ಭದಲ್ಲಿ ಹಾಗೆ ಆ ವಿಫಲತೆಯು ಅಥವಾ ಉಲ್ಲಂಘನೆಯು ಮುಂದುವರೆದ ಪ್ರತಿದಿನಕ್ಕೆ ನೂರು ರೂಪಾಯಿಗಳಿಗೆ ವಿಸ್ತರಿಸಬಹುದಾದ ಹೆಚ್ಚುವರಿ ಜುಲ್ಮಾನೆಯೊಂದಿಗೆ ದಂಡಿತನಾಗತಕ್ಕದ್ದು.

(2) ಪ್ರಾಧಿಕಾರದಿಂದ ಅನುಮತಿಯನ್ನು ಪಡೆಯದೆ ಬಾವಿಯನ್ನು ಕೊರೆಯುವುದಕ್ಕೆ/ ತೋಡುವುದಕ್ಕೆ ತೊಡಗಿರುವ ಯಾವೊಬ್ಬ ವ್ಯಕ್ತಿಯು, ಐದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದಂಥ ಜುಲ್ಮಾನೆ ಅಥವಾ ಆರು ತಿಂಗಳುಗಳವರೆಗೆ ವಿಸ್ತರಿಸಬಹುದಾದಂಥ ಕಾರಾವಾಸ ಅಥವಾ ಇವೆರಡೂ ದಂಡನೆಗೆ ಗುರಿಯಾಗತಕ್ಕದ್ದು. ಹಾಗೆ ಉಲ್ಲಂಘಿಸಿ ಕೊರೆದ ಅಥವಾ ತೋಡಿದ ಬಾವಿಯನ್ನು ಹಾಗೂ ಕೊರೆಯುವ/ತೋಡುವ ಉಪಕರಣಗಳನ್ನು ಪ್ರಾಧಿಕಾರವು ಅಥವಾ ಈ ಅಧಿನಿಯಮದ ಅಡಿಯಲ್ಲಿಯ ಯಾವುವೇ ಅಧಿಕಾರಗಳನ್ನು ಚಲಾಯಿಸುವುದಕ್ಕಾಗಿ ಅದು ಅಧಿಕಾರ ನೀಡಿರುವಂಥ ಇತರ ಯಾವೊಬ್ಬ ವ್ಯಕ್ತಿಯು, ನಿಯಮಿಸಬಹುದಾದಂಥ ರೀತಿಯಲ್ಲಿ ಸರ್ಕಾರದ ವಶಕ್ಕೆ ತೆಗೆದುಕೊಳ್ಳಬಹುದು ಮತ್ತು ಮುಟ್ಟುಗೋಲು ಹಾಕಿಕೊಳ್ಳಬಹುದು.

(3) ಬಾವಿ ಕೊರೆಯುವ ಅಥವಾ ತೋಡುವ ಏಜೆನ್ಸಿಯಲ್ಲದ, ನೋಂದಣಿಯಿಲ್ಲದೆ, ಅಧಿಸೂಚಿತ ಪ್ರದೇಶದಲ್ಲಿ, ಅನುಮತಿಯಿಲ್ಲದೆ ಬಾವಿಯನ್ನು ಕೊರೆಯುವ ಅಥವಾ ತೋಡುವ ಅಥವಾ ನೀರನ್ನು ಹೊರತೆಗೆಯುವುದನ್ನು ಮುಂದುವರೆಸುವ ಯಾವೊಬ್ಬ ಇತರ ವ್ಯಕ್ತಿಯು, ಮೇಲಿನ (1) ಮತ್ತು (2)ನೇ ಉಪ ಪ್ರಕರಣಗಳಲ್ಲಿ ನಮೂದಿಸಿರುವುಗಳನ್ನು ಹೊರತುಪಡಿಸಿ, ಈ ಅಧಿನಿಯಮದ ಇತರ ಯಾವುವೇ ಉಪಬಂಧಗಳನ್ನು ಅಥವಾ ಅದರಡಿಯಲ್ಲಿ ರಚಿಸಿದ ಯಾವುವೇ ನಿಯಮಗಳನ್ನು ಅಥವಾ ಅನುಮತಿ ಪತ್ರದ ಷರತ್ತುಗಳನ್ನು ಉಲ್ಲಂಘಿಸಿದರೆ ಅಥವಾ ಪಾಲಿಸಲು ವಿಫಲನಾದರೆ, ಅವನು ಎರಡು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದಂಥ ಜುಲ್ಮಾನೆ ಅಥವಾ ಮೂರು ತಿಂಗಳವರೆಗೆ ವಿಸ್ತರಿಸಬಹುದಾದಂಥ ಕಾರಾವಾಸ ಅಥವಾ ಅವೆರಡೂ ದಂಡನೆಗೆ ಗುರಿಯಾಗತಕ್ಕದ್ದು, ತರುವಾಯ ವಿಫಲತೆ ಅಥವಾ ಉಲ್ಲಂಘನೆಯ ಅಥವಾ ಅವು ಮುಂದುವರಿದ ಸಂದರ್ಭದಲ್ಲಿ ಹಾಗೆ ಉಲ್ಲಂಘಿಸಿ ತೋಡಿದ ಬಾವಿಯನ್ನು ಹಾಗೂ ಬಾವಿ ತೋಡುವ ಉಪಕರಣಗಳನ್ನು ಪ್ರಾಧಿಕಾರವು ಅಥವಾ ಈ ಅಧಿನಿಯಮದ ಅಡಿಯಲ್ಲಿಯ ಇತರ ಯಾವುವೇ ಅಧಿಕಾರಗಳನ್ನು ಚಲಾಯಿಸಲು ಅದು ಅಧಿಕಾರ ನೀಡಿದ ಯಾವೊಬ್ಬ ಇತರ ವ್ಯಕ್ತಿಯು ನಿಯಮಿಸಬಹುದಾದ ರೀತಿಯಲ್ಲಿ ಸರ್ಕಾರದ ವಶಕ್ಕೆ ತೆಗೆದುಕೊಳ್ಳಬಹುದು ಅಥವಾ ಮುಟ್ಟುಗೋಲು ಹಾಕಿಕೊಳ್ಳಬಹುದು.

(4) ಮೇಲಿನ (1)ನೇ ಉಪಪ್ರಕರಣದಲ್ಲಿ ನಮೂದಿಸಿರುವುದನ್ನು ಹೊರತುಪಡಿಸಿ, ಈ ಅಧಿನಿಯಮದ ಯಾವುವೇ ಇತರ ಉಪಬಂಧಗಳನ್ನು ಅಥವಾ ಅದರಡಿಯಲ್ಲಿ ರಚಿಸಿದ ಯಾವುವೇ ನಿಯಮಗಳನ್ನು ಅಥವಾ ನೋಂದಣಿ ಪ್ರಮಾಣ ಪತ್ರದ ಷರತ್ತುಗಳನ್ನು ಉಲ್ಲಂಘಿಸಿದ ಅಥವಾ ಪಾಲಿಸಲು ವಿಫಲನಾದ ಯಾವೊಬ್ಬ ಬಾವಿ ತೋಡುವ ವ್ಯಕ್ತಿ ಅಥವಾ ಕೊರೆಯುವ/ತೋಡುವ ಏಜೆನ್ಸಿಯು ಹತ್ತು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದಂಥ ಜುಲ್ಮಾನೆ ಅಥವಾ ಒಂದು ವರ್ಷದವರೆಗೆ ವಿಸ್ತರಿಸಬಹುದಾದಂಥ ಅವಧಿಯ ಕಾರಾವಾಸದ ದಂಡನೆಗೆ ಗುರಿಯಾಗತಕ್ಕದ್ದು. ತರುವಾಯದ ಮತ್ತು ಮುಂದುವರಿದ ವಿಫಲತೆ ಅಥವಾ ಉಲ್ಲಂಘನೆಯ ಸಂದರ್ಭದಲ್ಲಿ ಹಾಗೆ ಉಲ್ಲಂಘಿಸಿ ತೋಡಿದ ಬಾವಿಯನ್ನು ಹಾಗೂ ಬಾವಿ ಕೊರೆಯುವ/ತೋಡುವ ಉಪಕರಣಗಳನ್ನು ಪ್ರಾಧಿಕಾರವು ಅಥವಾ ಈ ಅಧಿನಿಯಮದ ಅಡಿಯಲ್ಲಿ ಯಾವುದೇ ಅಧಿಕಾರಗಳನ್ನು ಚಲಾಯಿಸಲು ಅದರಿಂದ ಅಧಿಕಾರ ಪಡೆದ ಯಾವೊಬ್ಬ ಇತರ ವ್ಯಕ್ತಿಯು, ನಿಯಮಿಸಬಹುದಾದಂಥ ರೀತಿಯಲ್ಲಿ ಸರ್ಕಾರದ ವಶಕ್ಕೆ ತೆಗೆದುಕೊಳ್ಳಬಹುದು ಅಥವಾ ಮುಟ್ಟುಗೋಲು ಹಾಕಿಕೊಳ್ಳಬಹುದು.

**33. ಅಪರಾಧಗಳ ರಾಜಿ.–** (1) ಪ್ರಾಧಿಕಾರವು ಅಥವಾ ಈ ಸಂಬಂಧದಲ್ಲಿ ಪ್ರಾಧಿಕಾರದಿಂದ ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ಅಧಿಕಾರ ಪಡೆದ ಯಾವೊಬ್ಬ ಅಧಿಕಾರಿಯು, ವ್ಯವಹರಣೆಗಳು ಪ್ರಾರಂಭವಾಗುವ ಮುಂಚೆ ಅಥವಾ ತರುವಾಯ ಈ ಅಧಿನಿಯಮದ ಅಡಿಯಲ್ಲಿ ಅಥವಾ ಅದರ ಅಡಿಯಲ್ಲಿ ರಚಿಸಲಾದ ನಿಯಮಗಳ ಅಡಿಯಲ್ಲಿ ಶಿಕ್ಷಾರ್ಹವಾದ ಒಂದು ಅಪರಾಧವನ್ನು ಮಾಡಿರುವ ಅಥವಾ ಅಂಥ ಅಪರಾಧವನ್ನು ಮಾಡಿರುವನೆಂದು ಯುಕ್ತವಾಗಿ ಊಹಿಸಬಹುದಾದಂಥ ವ್ಯಕ್ತಿಯಿಂದ ಸರ್ಕಾರವು ಅಂಥ ಅಪರಾಧದ ಬಗ್ಗೆ ರಾಜಿಯ ರೂಪದಲ್ಲಿ ನಿಯಮಿಸಬಹುದಾದಂಥ ಮೊಬಲಗನ್ನು ಸ್ವೀಕರಿಸಬಹುದು.

(2) ಅಪರಾಧದ ಬಗ್ಗೆ ರಾಜಿಮಾಡಿಕೊಂಡಿರುವಲ್ಲಿ, ಅಪರಾಧಿಯು ಅಭಿರಕ್ಷೆಯಲ್ಲಿದ್ದರೆ, ಅವನನ್ನು ಬಿಡುಗಡೆ ಮಾಡತಕ್ಕದ್ದು ಮತ್ತು ರಾಜಿ ಮಾಡಿಕೊಳ್ಳಲಾದ ಅಪರಾಧಕ್ಕೆ ಸಂಬಂಧಿಸಿದಂತೆ ಅವನ ವಿರುದ್ಧವಾಗಿ ಮುಂದಿನ ಯಾವ ಕ್ರಮವನ್ನೂ ತೆಗೆದುಕೊಳ್ಳತಕ್ಕದ್ದಲ್ಲ.

**34. ಕಂಪನಿಗಳಿಂದ ಅಪರಾಧಗಳು.–** (1) ಈ ಅಧಿನಿಯಮದ ಮೇರೆಗೆ ಅಪರಾಧವನ್ನು ಮಾಡಿದ ವ್ಯಕ್ತಿಯು ನಿಗಮಿತವಾಗಿರುವ ಅಥವಾ ನಿಗಮಿತವಾಗಿರುವ ಒಂದು ಕಂಪನಿಯಾಗಿದ್ದರೆ, ಅಪರಾಧ ನಡೆದ ಕಾಲದಲ್ಲಿ ಕಂಪನಿಯ ಆಡಳಿತವನ್ನು ಹೊಂದಿದ್ದ ಮತ್ತು ಅದರ ವ್ಯವಹಾರಗಳನ್ನು ನಡೆಸುವ ಬಗ್ಗೆ ಕಂಪನಿಗೆ ಹೊಣೆಗಾರನಾಗಿದ್ದ ಪ್ರತಿಯೊಬ್ಬ ವ್ಯಕ್ತಿಯನ್ನು ಹಾಗೂ ಕಂಪನಿಯನ್ನು ಆ ಅಪರಾಧದ ಬಗ್ಗೆ ತಪ್ಪಿತಸ್ಥರೆಂದು ಭಾವಿಸತಕ್ಕದ್ದು ಮತ್ತು ಅವರು ತಮ್ಮ ವಿರುದ್ಧ ವ್ಯವಹರಣೆ ನಡೆಸುವುದಕ್ಕೆ ಹಾಗೂ ಅದಕ್ಕನುಗುಣವಾಗಿ ದಂಡನೆಗೆ ಗುರಿಯಾಗತಕ್ಕದ್ದು:

ಪರಂತು, ಈ ಉಪ–ಪ್ರಕರಣದಲ್ಲಿ ಇರುವುದು ಯಾವುದೂ, ಅಪರಾಧವು ತನ್ನ ಗಮನಕ್ಕೆ ಬರದೇ ನಡೆಯಿತೆಂದು ಅಥವಾ ಅಂಥ ಅಪರಾಧವು ನಡೆಯುವುದನ್ನು ತಡೆಗಟ್ಟಲು ತಾನು ಎಲ್ಲಾ ಯುಕ್ತ ಜಾಗರೂಕತೆಯನ್ನು ವಹಿಸಿದ್ದೆನೆಂದು ಅಂಥ ವ್ಯಕ್ತಿಯು ರುಜುವಾತುಪಡಿಸಿದರೆ, ಅಂಥ ಯಾವೊಬ್ಬ ವ್ಯಕ್ತಿಯನ್ನು ಈ ಅಧಿನಿಯಮದ ಅಡಿಯಲ್ಲಿ ಯಾವುದೇ ದಂಡನೆಗೆ ಗುರಿಯಾಗುವಂತೆ ಮಾಡತಕ್ಕದ್ದಲ್ಲ.

(2) (1)ನೇ ಉಪ–ಪ್ರಕರಣದಲ್ಲಿ ಏನೇ ಇದ್ದರೂ, ಈ ಅಧಿನಿಯಮದ ಅಡಿಯಲ್ಲಿನ ಅಪರಾಧವನ್ನು ಕಂಪನಿಯು ಮಾಡಿರುವಲ್ಲಿ ಮತ್ತು ಆ ಅಪರಾಧವು ಆ ಕಂಪನಿಯ ಯಾವೊಬ್ಬ ನಿರ್ದೇಶಕನ, ವ್ಯವಸ್ಥಾಪಕನ, ಕಾರ್ಯದರ್ಶಿಯ ಅಥವಾ ಇತರ ಅಧಿಕಾರಿಯ ಸಮ್ಮತಿಯಿಂದ ನಡೆಯಿತೆಂದು ಅಥವಾ ಪರೋಕ್ಷ ಸಮ್ಮತಿಯಿಂದ ನಡೆಯಿತೆಂದು ಅಥವಾ ಆ ಅಪರಾಧ ನಡೆಯುವುದಕ್ಕೆ ಅವನ ಯಾವುದೇ ನಿರ್ಲಕ್ಷತೆ ಕಾರಣವೆಂದು ರುಜುವಾತು

ಆದಲ್ಲಿ, ಅಂಥ ನಿರ್ದೇಶಕನು, ವ್ಯವಸ್ಥಾಪಕನು, ಕಾರ್ಯದರ್ಶಿಯು ಅಥವಾ ಇತರ ಅಧಿಕಾರಿಯು ಸಹ ಅಂಥ ಅಪರಾಧದ ದೋಷಿಯೆಂದು ಭಾವಿಸತಕ್ಕದ್ದು ಮತ್ತು ಅವನು ತನ್ನ ವಿರುದ್ಧ ವ್ಯವಹರಣೆ ನಡೆಸುವುದಕ್ಕೆ ಹಾಗೂ ಅದಕ್ಕನುಗುಣವಾಗಿ ದಂಡಿತನಾಗುವುದಕ್ಕೆ ಗುರಿಯಾಗತಕ್ಕದ್ದು.

**ವಿವರಣೆ :** ಈ ಪ್ರಕರಣದ ಉದ್ದೇಶಗಳಿಗಾಗಿ.–

(ಎ) **"ಕಂಪನಿ"** ಎಂದರೆ, ಒಂದು ನಿಗಮಿತ ನಿಕಾಯ ಮತ್ತು ಅದು ಫರ್ಮ್‌ನ್ನು ಅಥವಾ ವ್ಯಕ್ತಿಗಳ ಇತರ ಸಂಘವನ್ನು ಒಳಗೊಳ್ಳುತ್ತದೆ ; ಮತ್ತು

(ಬಿ) ಫರ್ಮ್‌ನ ಸಂಬಂಧದಲ್ಲಿ **"ನಿರ್ದೇಶಕ"** ಎಂದರೆ, ಆ ಫರ್ಮಿನ ಒಬ್ಬ ಪಾಲುದಾರ.

**35. ಸಿವಿಲ್ ನ್ಯಾಯಾಲಯಗಳ ಅಧಿಕಾರ ವ್ಯಾಪ್ತಿಗೆ ಪ್ರತಿಷೇಧ.–** ಈ ಅಧಿನಿಯಮದ ಮೂಲಕ ತೀರ್ಮಾನ ಕೈಗೊಳ್ಳಲು ರಾಜ್ಯ ಸರ್ಕಾರಕ್ಕೆ ಅಥವಾ ಪ್ರಾಧಿಕಾರಕ್ಕೆ ಅಧಿಕಾರ ನೀಡಲಾದ ಯಾವುದೇ ವಿಷಯಕ್ಕೆ ಸಂಬಂಧಪಟ್ಟಂತೆ, ಯಾವುದೇ ದಾವೆ ಅಥವಾ ಇತರ ವ್ಯವಹರಣೆಗಳನ್ನು ಪುರಸ್ಕರಿಸಲು ಅಥವಾ ತೀರ್ಮಾನಿಸಲು ಯಾವುದೇ ಸಿವಿಲ್ ನ್ಯಾಯಾಲಯಕ್ಕೆ ಅಧಿಕಾರ ವ್ಯಾಪ್ತಿ ಇರತಕ್ಕದ್ದಲ್ಲ ಮತ್ತು ಈ ಅಧಿನಿಯಮದಿಂದ ಅಥವಾ ಅದರ ಅಡಿಯಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಸರ್ಕಾರ ಅಥವಾ ಪ್ರಾಧಿಕಾರವು ಕೈಗೊಂಡ ಅಥವಾ ಕೈಗೊಳ್ಳಲು ಉದ್ದೇಶಿಸಿದ ಯಾವುದೇ ಕ್ರಮಕ್ಕೆ ಸಂಬಂಧಪಟ್ಟಂತೆ ಯಾವುದೇ ನ್ಯಾಯಾಲಯವು ಯಾವುದೇ ನಿರ್ಬಂಧಕಾಜ್ಞೆಯನ್ನು ನೀಡತಕ್ಕದ್ದಲ್ಲ.

**36. ಜುಲ್ಮಾನೆಗಳನ್ನು ಪ್ರಾಧಿಕಾರದ ನಿಧಿಗೆ ಜಮೆ ಮಾಡುವುದು.–** ಈ ಅಧಿನಿಯಮದ ಅಡಿಯಲ್ಲಿ ಅಥವಾ ನ್ಯಾಯಾಲಯದ ಆದೇಶದ ಅಡಿಯಲ್ಲಿ ವಸೂಲಾದ ಎಲ್ಲಾ ಜುಲ್ಮಾನೆಗಳನ್ನು ಪ್ರಾಧಿಕಾರದ ನಿಧಿಗೆ ಸಂದಾಯ ಮಾಡತಕ್ಕದ್ದು.

**37. ಇತರ ಕಾನೂನುಗಳ ಅಡಿಯಲ್ಲಿನ ಶಿಕ್ಷೆಯು ಪ್ರತಿಷೇಧಿತವಲ್ಲ.–** ಈ ಅಧಿನಿಯಮದಲ್ಲಿರುವುದು ಯಾವುದೂ, ಈ ಅಧಿನಿಯಮದ ಮೂಲಕ ಅಥವಾ ಅದರ ಅಡಿಯಲ್ಲಿ ಶಿಕ್ಷೆಗೆ ಗುರಿಯಾದ ಯಾವುದೇ ಕಾರ್ಯಕ್ಕಾಗಿ ಅಥವಾ ಲೋಪಕ್ಕಾಗಿ ತತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನ ಅಡಿಯಲ್ಲಿ ಯಾವೊಬ್ಬ ವ್ಯಕ್ತಿಯನ್ನು ಅಭಿಯೋಜನೆಗೆ ಗುರಿಪಡಿಸುವುದನ್ನು ಮತ್ತು ಶಿಕ್ಷಿಸುವುದನ್ನು ತಡೆಯತಕ್ಕದ್ದಲ್ಲ:

ಪರಂತು, ಯಾವೊಬ್ಬ ವ್ಯಕ್ತಿಯನ್ನು ಅದೇ ಅಪರಾಧಕ್ಕಾಗಿ ಒಂದಕ್ಕಿಂತ ಹೆಚ್ಚು ಬಾರಿ ಅಭಿಯೋಜನೆಗೆ ಗುರಿಪಡಿಸತಕ್ಕದ್ದಲ್ಲ ಮತ್ತು ಶಿಕ್ಷಿಸತಕ್ಕದ್ದಲ್ಲ.

**38. ನಿಯಮಗಳ ರಚನಾಧಿಕಾರ.–** (1) ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ ಮತ್ತು ಪೂರ್ವ ಪ್ರಕಟಣೆಯ ತರುವಾಯ ಈ ಅಧಿನಿಯಮದ ಉದ್ದೇಶಗಳನ್ನು ನೆರವೇರಿಸುವುದಕ್ಕಾಗಿ ನಿಯಮಗಳನ್ನು ರಚಿಸಬಹುದು.

(2) ವಿಶೇಷವಾಗಿ ಮತ್ತು ಮೇಲೆ ಹೇಳಲಾದ ಅಧಿಕಾರದ ಸಾಮಾನ್ಯ ಅನ್ವಯಕ್ಕೆ ಬಾಧಕವಾಗದಂತೆ ಅಂಥ ನಿಯಮಗಳು, ಈ ಮುಂದಿನ ಎಲ್ಲ ಅಥವಾ ಯಾವುವೇ ವಿಷಯಗಳಿಗಾಗಿ ಉಪಬಂಧ ಕಲ್ಪಿಸಬಹುದು, ಎಂದರೆ :–

(ಎ) ಪ್ರಾಧಿಕಾರದ ಅಧಿಕಾರೇತರ ಸದಸ್ಯರುಗಳ ಪದಾವಧಿ ಮತ್ತು ಖಾಲಿ ಸ್ಥಾನಗಳನ್ನು ಭರ್ತಿ ಮಾಡುವ ಕ್ರಮ ಮತ್ತು ಇತರ ಸೇವಾ ಷರತ್ತುಗಳು ;

(ಬಿ) ಪ್ರಾಧಿಕಾರದ ನೌಕರರ ಅಧಿಕಾರಗಳು ಮತ್ತು ಕರ್ತವ್ಯಗಳು ಮತ್ತು ಸೇವಾ ನಿಬಂಧನೆಗಳು ಮತ್ತು ಷರತ್ತುಗಳು ;

(ಸಿ) 10ನೇ ಪ್ರಕರಣದ (3)ನೇ ಉಪ–ಪ್ರಕರಣದ ಅಡಿಯಲ್ಲಿ ಅಧಿಸೂಚನೆಯ ಪ್ರಕಟಣೆಯ ವಿಧಾನ ;

(ಡಿ) 11ನೇ ಪ್ರಕರಣದ ಅಡಿಯಲ್ಲಿ ಅರ್ಜಿಯ ನಮೂನೆ ;

(ಇ) 11ನೇ ಪ್ರಕರಣದ ಅಡಿಯಲ್ಲಿ ಅನುಮತಿ ಪತ್ರದ ನಮೂನೆ ;

(ಎಫ್) 12ನೇ ಪ್ರಕರಣದ (1)ನೇ ಉಪ–ಪ್ರಕರಣದ ಅಡಿಯಲ್ಲಿ ಅರ್ಜಿಯ ನಮೂನೆ ;

(ಜಿ) 12ನೇ ಪ್ರಕರಣದ (6)ನೇ ಉಪ ಪ್ರಕರಣದ ಅಡಿಯಲ್ಲಿ ನೋಂದಣಿ ಪ್ರಮಾಣ ಪತ್ರದ ನಮೂನೆ ;

(ಎಚ್) 13ನೇ ಪ್ರಕರಣದ (1)ನೇ ಉಪ–ಪ್ರಕರಣದ ಅಡಿಯಲ್ಲಿ ನೋಂದಣಿ ಪ್ರಮಾಣ ಪತ್ರ ಮತ್ತು ಶುಲ್ಕಗಳ ಅರ್ಜಿಯ ನಮೂನೆ ;

(ಐ) 13ನೇ ಪ್ರಕರಣದ (3)ನೇ ಉಪ ಪ್ರಕರಣದ ಅಡಿಯಲ್ಲಿ ನೋಂದಣಿ ಪ್ರಮಾಣ ಪತ್ರದ ನಮೂನೆ ಮತ್ತು ಶುಲ್ಕ;

(ಜೆ) 17(1)(ಸಿ) ಪ್ರಕರಣದ ಅಡಿಯಲ್ಲಿ ಮಣ್ಣಿನ ಮಾದರಿಗಳನ್ನು ಅಥವಾ ಇತರ ವಸ್ತುಗಳನ್ನು ಇಟ್ಟುಕೊಳ್ಳತಕ್ಕ ಮತ್ತು ಸಂರಕ್ಷಿಸಿಕೊಂಡು ಬರತಕ್ಕ ವಿಧಾನ ;

(ಕೆ) 17ನೇ ಪ್ರಕರಣದ (1)ನೇ ಉಪ–ಪ್ರಕರಣದ (ಎಫ್) ಖಂಡದ ಅಡಿಯಲ್ಲಿ ಮಾಹಿತಿ ಅಥವಾ ವಿವರ ಪತ್ರವನ್ನು ಸಲ್ಲಿಸತಕ್ಕ ನಮೂನೆ ಮತ್ತು ಒದಗಿಸತಕ್ಕ ಕಾಲಾಂತರ ಮತ್ತು ಅಂಥ ಮಾಹಿತಿ ಅಥವಾ ವಿವರ ಪತ್ರದಲ್ಲಿ ಒಳಗೊಂಡಿರತಕ್ಕ ವಿವರಗಳು ;

(ಎಲ್) 41ನೇ ಪ್ರಕರಣದ (1)ನೇ ಉಪ ಪ್ರಕರಣದ ಅಡಿಯಲ್ಲಿ ಅಪೀಲು ಪ್ರಾಧಿಕಾರವನ್ನು ನಿರ್ದಿಷ್ಟಪಡಿಸುವುದು ಹಾಗೂ ಅಪೀಲು ಅರ್ಜಿಯೊಡನೆ ಇರಬೇಕಾದ ಶುಲ್ಕ ;

(ಎಮ್) ನಿಯಮಿಸಬೇಕಾದ ಅಥವಾ ನಿಯಮಿಸಬಹುದಾದಂಥ ಯಾವುದೇ ಇತರ ವಿಷಯ.

(3) ಈ ಅಧಿನಿಯಮದ ಅಡಿಯಲ್ಲಿ ರಚಿಸಿದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ ಸಾಧ್ಯವಾದಷ್ಟು ಬೇಗನೆ, ರಾಜ್ಯ ವಿಧಾನ ಮಂಡಲದ ಪ್ರತಿಯೊಂದು ಸದನದ ಮುಂದೆ, ಅದು ಒಂದು ಅಧಿವೇಶನ ಅಥವಾ ಎರಡು ಅಥವಾ ಹೆಚ್ಚಿನ ಅನುಕ್ರಮ ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಅಧಿವೇಶನದಲ್ಲಿರುವಾಗ ಮಂಡಿಸತಕ್ಕದ್ದು ಮತ್ತು ಅದನ್ನು ಹಾಗೆ ಮಂಡಿಸಿದ ಅಧಿವೇಶನ ಅಥವಾ ನಿಕಟೋತ್ತರ ಅಧಿವೇಶನಗಳು ಮುಕ್ತಾಯಗೊಳ್ಳುವುದಕ್ಕೆ ಮೊದಲು ಯಾವುದೇ ನಿಯಮವನ್ನು ರಚಿಸಲು ಅಥವಾ ಆ ನಿಯಮವನ್ನು ರಚಿಸಕೂಡದೆಂದು ಎರಡೂ ಸದನಗಳು ಒಪ್ಪಿದರೆ, ತದನಂತರ ಆ ನಿಯಮವು, ಸಂದರ್ಭಾನುಸಾರ, ಹಾಗೆ ಮಾರ್ಪಾಟಾದ ರೀತಿಯಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಅಥವಾ ಪರಿಣಾಮಕಾರಿಯಾಗತಕ್ಕದ್ದಲ್ಲ. ಆದಾಗ್ಯೂ, ಅಂಥ ಯಾವುದೇ ಮಾರ್ಪಾಟು ಅಥವಾ ರದ್ದತಿಯು ಆ ನಿಯಮದ ಅಡಿಯಲ್ಲಿ ಹಿಂದೆ ಮಾಡಲಾದ ಯಾವುದೇ ಕಾರ್ಯದ ಮಾನ್ಯತೆಗೂ ಬಾಧಕವಾಗತಕ್ಕದ್ದಲ್ಲ.

**39. ವಿನಿಯಮಗಳು.–** ಪ್ರಾಧಿಕಾರವು, ರಾಜ್ಯ ಸರ್ಕಾರದ ಪೂರ್ವಾನುಮೋದನೆಯೊಂದಿಗೆ, ಅಧಿಸೂಚನೆಯ ಮೂಲಕ, ಈ ಅಧಿನಿಯಮದ ಅಡಿಯಲ್ಲಿ ತನ್ನ ಪ್ರಕಾರ್ಯಗಳನ್ನು ನೆರವೇರಿಸುವುದಕ್ಕೆ ಸಂಬಂಧಪಟ್ಟಿರುವಷ್ಟರ ಮಟ್ಟಿಗೆ ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯಗತಗೊಳಿಸಲು ಈ ಅಧಿನಿಯಮದ ಉಪಬಂಧಗಳಿಗೆ ಅಥವಾ ಅದರ ಅಡಿಯಲ್ಲಿ ರಚಿಸಿದ ನಿಯಮಗಳಿಗೆ ಅಸಂಗತವಾಗಿರದ ವಿನಿಯಮಗಳನ್ನು ರಚಿಸಬಹುದು.

**40. ತೊಂದರೆಗಳನ್ನು ನಿವಾರಿಸಲು ಅಧಿಕಾರ.–** (1) ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವಲ್ಲಿ ಯಾವುದೇ ತೊಂದರೆ ಉದ್ಭವಿಸಿದರೆ, ರಾಜ್ಯ ಸರ್ಕಾರವು, ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಿಸಿದ ಆದೇಶದ ಮೂಲಕ ಆ ತೊಂದರೆಯನ್ನು ನಿವಾರಿಸಲು ಅಗತ್ಯವೆಂದು ಅಥವಾ ಯುಕ್ತವೆಂದು ಕಂಡು ಬರಬಹುದಾದಂಥ, ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಾಗಿರದಂಥ ಉಪಬಂಧಗಳನ್ನು ರಚಿಸಬಹುದು:

ಪರಂತು, ಈ ಅಧಿನಿಯಮದ ಪ್ರಾರಂಭದ ದಿನಾಂಕದಿಂದ ಎರಡು ವರ್ಷಗಳು ಮುಕ್ತಾಯವಾದ ತರುವಾಯ ಅಂಥ ಯಾವುದೇ ಆದೇಶವನ್ನೂ ಮಾಡತಕ್ಕದ್ದಲ್ಲ.

(2) ಈ ಪ್ರಕರಣದ ಅಡಿಯಲ್ಲಿ ಮಾಡಿದ ಪ್ರತಿಯೊಂದು ಆದೇಶವನ್ನು, ಅದನ್ನು ಮಾಡಿದ ತರುವಾಯ ಸಾಧ್ಯವಾದಷ್ಟು ಬೇಗನೆ ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ ಮಂಡಿಸತಕ್ಕದ್ದು.

**41. ಅಪೀಲುಗಳು.–** (1) ಈ ಅಧಿನಿಯಮದ ಅಡಿಯಲ್ಲಿ ಪ್ರಾಧಿಕಾರದ ತೀರ್ಮಾನದಿಂದ ಅಥವಾ ಕ್ರಮದಿಂದ ಬಾಧಿತನಾದ ಯಾವೊಬ್ಬ ವ್ಯಕ್ತಿಯು, ಕೈಗೊಂಡ ಕಾರ್ಯ ಅಥವಾ ತೀರ್ಮಾನವನ್ನು ಆತನಿಗೆ ತಿಳಿಸಿದ ದಿನಾಂಕದಿಂದ ಅರವತ್ತು ದಿನಗಳ ಅವಧಿಯ ಒಳಗಾಗಿ ಹಾಗೂ ನಿಯಮಿಸಬಹುದಾದಂಥ ಶುಲ್ಕವನ್ನು ಸಂದಾಯ ಮಾಡಿದ ಮೇಲೆ, ಈ ಸಂಬಂಧದಲ್ಲಿ ಸರ್ಕಾರವು ನಿರ್ದಿಷ್ಟಪಡಿಸಬಹುದಾದಂಥ ಪ್ರಾಧಿಕರಕ್ಕೆ ಅಂಥ ಅಪೀಲನ್ನು ಸಲ್ಲಿಸಬಹುದು:

ಪರಂತು, ಅಪೀಲು ಪ್ರಾಧಿಕಾರವು ಅಪೀಲನ್ನು ನಿಗದಿತ ಸಮಯದೊಳಗೆ ಸಲ್ಲಿಸಲು ಆಗದಿರಲು ಸಾಕಷ್ಟು ಕಾರಣಗಳು ಅರ್ಜಿದಾರನಿಗೆ ಇದ್ದವೆಂದು ಮನಗಂಡರೆ ಸದರಿ ಅರವತ್ತು ದಿನಗಳ ಅವಧಿಯ ಮುಗಿದ ನಂತರವೂ ಅರ್ಜಿಯನ್ನು ಪುರಸ್ಕರಿಸಬಹುದು.

(2) (1)ನೇ ಉಪ ಪ್ರಕರಣದ ಅಡಿಯಲ್ಲಿ ಅರ್ಜಿಯನ್ನು ಸ್ವೀಕರಿಸಿದ ತರುವಾಯ ಅಪೀಲು ಪ್ರಾಧಿಕಾರವು ಅರ್ಜಿದಾರನಿಗೆ ಅಹವಾಲನ್ನು ಹೇಳಿಕೊಳ್ಳಲು ಅವಕಾಶವನ್ನು ನೀಡಿದ ತರುವಾಯ ಸಾಧ್ಯವಾದಷ್ಟು ಬೇಗನೆ ಅರ್ಜಿಯನ್ನು ವಿಲೆಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಕೆ.ಬೋರೇಗೌಡ**

ಸರ್ಕಾರದ ಕಾರ್ಯದರ್ಶಿ

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – III | ಬೆಂಗಳೂರು, ಶುಕ್ರವಾರ, ಮಾರ್ಚ್ ೨೫, ೨೦೧೧ (ಚೈತ್ರ ೪, ಶಕ ವರ್ಷ ೧೯೩೨) | ನಂ. ೩೫೫ |
|---|---|---|

**ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ**

**(ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ)**

**ತಿದ್ದುಪಡಿ ಅಧಿಸೂಚನೆ**

**ಸಂಖ್ಯೆ : ಲೋಇ : 139 : ಇಎಪಿ : 2010, ಬೆಂಗಳೂರು, ದಿನಾಂಕ : 24–03–2011**

ಕರ್ನಾಟಕ ರಾಜ್ಯ ಹೆದ್ದಾರಿ ಕಾಯ್ದೆ 1964 ಕಲಂ 15 ರ ಮೇರೆಗೆ ರಾಜ್ಯ ಹೆದ್ದಾರಿ ಸಂಖ್ಯೆ 64 (ಲಿಂಕ್ ನಂ. 64 – ಹೆಚ್) (ಪಾವಗಡದಿಂದ ಆಂಧ್ರಪ್ರದೇಶ ಗಡಿಯವರೆಗೆ)ಗೆ ರಸ್ತೆ ಅಭಿವೃದ್ಧಿ ಪಡಿಸುವ ಉದ್ದೇಶಕ್ಕಾಗಿ ಸರ್ಕಾರದ ಅಧಿಸೂಚನೆ ಸಂಖ್ಯೆ: ಲೋಇ:139:ಇಎಪಿ:2010, ಬೆಂಗಳೂರು, ದಿನಾಂಕ: 12.1.2011ರಲ್ಲಿ ಅಧಿಸೂಚನೆ ಪ್ರಕಟಿಸಲಾಗಿದ್ದು, ಸದರಿ ಅಧಿಸೂಚನೆಯ ಪುಟ ಸಂಖ್ಯೆ: 7ರ ಕ್ರಮ ಸಂಖ್ಯೆ 23 ರಲ್ಲಿ ಮೊದಲನೆಯ ಹೆಸರು ಹೆಚ್.ಸುಬ್ಬರಾಯಪ್ಪ ಬಿನ್ ಹನುಮಂತಪ್ಪ ಎಂಬುದಾಗಿ ತಪ್ಪಾಗಿ ಮುದ್ರಿತವಾಗಿದ್ದು, ಅದನ್ನು ಹೆಚ್.ನಾರಾಯಣಪ್ಪ ಬಿನ್ ಹನುಮಂತಪ್ಪ ಎಂಬುದಾಗಿ ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ದೇವಿಪ್ರಸಾದ್**
ಸರ್ಕಾರದ ಅಧೀನ ಕಾರ್ಯದರ್ಶಿ
ಲೋಕೋಪಯೋಗಿ ಬಂದರು ಹಾಗೂ ಒಳನಾಡು
ಜಲಸಾರಿಗೆ ಇಲಾಖೆ (ಇಎಪಿ)

# ವಿಶೇಷ ಪತ್ರಿಕೆ

| ಭಾಗ – III | ಬೆಂಗಳೂರು, ಶನಿವಾರ, ಮಾರ್ಚ್ ೨೬, ೨೦೧೧ (ಚೈತ್ರ ೫, ಶಕ ವರ್ಷ ೧೯೩೨) | ನಂ. ೩೬೫ |
|---|---|---|

**ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ**

**1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ ಕಲಂ 28(4)ರ ಅಧಿಸೂಚನೆ**

**ಸಂಖ್ಯೆ: ಸಿಐ 129 ಎಸ್.ಪಿ.ಕ್ಯೂ 2011, ಬೆಂಗಳೂರು, ದಿನಾಂಕ: 25ನೇ ಮಾರ್ಚ್, 2011**

ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯಿದೆ (ಕರ್ನಾಟಕ ಕಾಯಿದೆ 1966) (ಈ ಮುಂದೆ ಪ್ರಸ್ತುತ ಕಾಯಿದೆ ಎಂದು ಹೇಳಲಾಗಿದೆ) ಕಲಂ 28(1) ರನ್ವಯ ವಿಹಿತವಾಗಿರುವ ಅಧಿಕಾರದಡಿ ಅಧಿಸೂಚನೆ ನಂಬ್ರ ಸಿ.ಐ 487 ಎಸ್‌ಪಿಕ್ಯೂ 2010 ದಿನಾಂಕ 06–09–2010, ಬೆಂಗಳೂರು, (ಈ ಮುಂದೆ ಅಧಿಸೂಚನೆ ಎಂದು ಹೇಳಲಾಗಿದೆ) ರಂದು ಹೊರಡಿಸಿದ ದಿನಾಂಕ 07–09–2010 ರಂದು ಪ್ರಕಟವಾದ ಕರ್ನಾಟಕ ರಾಜ್ಯ ಪತ್ರದ ಪುಟ ಸಂಖ್ಯೆ 1 ರಿಂದ 4 ರ ತನಕ ವಿಶೇಷ ಪತ್ರಿಕೆ ಭಾಗ – 3, ಸೆಕ್ಷನ್ 1 ರಲ್ಲಿ ಕರ್ನಾಟಕ ಸರಕಾರವು ಐ.ಟಿ. ಎಸ್.ಇ.ಝೆಡ್ ಗಾಗಿ ರೇಜಕ ಸ್ಥಾವರದ ನಿರ್ಮಾಣದ ಯೋಜನೆಯ ಉದ್ದೇಶಕ್ಕಾಗಿ ಪ್ರಸ್ತುತ ಅಧಿಸೂಚನೆಯಲ್ಲಿ ಕಾಣಿಸಿರುವ ಜಮೀನುಗಳನ್ನು ಸ್ವಾಧೀನಪಡಿಸಿಕೊಳ್ಳಲು ತನ್ನ ಉದ್ದೇಶವನ್ನು ಪ್ರಕಟಿಸಿತ್ತು.

ಅದರಂತೆ ಪ್ರಸ್ತುತ ಕಾಯಿದೆಯನ್ವಯ ಕಲಂ 28ರ ಉಪ ಕಲಂ (3)ರನ್ವಯ ಆಜ್ಞೆಯನ್ನು ಹೊರಡಿಸಲಾಗಿದೆ ಮತ್ತು ಈ ಕೆಳಗೆ ಅನುಸೂಚಿಯಲ್ಲಿ ಕಾಣಿಸಿರುವ ಜಮೀನುಗಳ ವಿವರವನ್ನು ಅಧಿಸೂಚನೆಯಲ್ಲಿಯೂ ಕಾಣಿಸಲ್ಪಟ್ಟಿದೆ ಹಾಗೂ ಅಧಿಸೂಚನೆಯಲ್ಲಿ ಕಾಣಿಸಿರುವ ಉದ್ದೇಶಕ್ಕಾಗಿ ಸ್ವಾಧೀನ ಪಡಿಸಿಕೊಳ್ಳಬೇಕೆಂದು ಕರ್ನಾಟಕ ಸರಕಾರಕ್ಕೆ ಮನವರಿಕೆಯಾಗಿದೆ.

ಆದುದರಿಂದ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯಿದೆ 1966 (ಕರ್ನಾಟಕ ಕಾಯಿದೆ 18:1966)ರ ಕಲಂ 28ರ ಉಪ ಕಲಂ (4) ರನ್ವಯ ವಿಹಿತವಾಗಿರುವ ಅಧಿಕಾರದ ಮೇರೆಗೆ ಐ.ಟಿ. ಎಸ್.ಇ.ಝೆಡ್ ಗಾಗಿ ರೇಜಕ ಸ್ಥಾವರದ ನಿರ್ಮಾಣದ ಯೋಜನೆಯ ಉದ್ದೇಶಕ್ಕಾಗಿ ಈ ಕೆಳಗೆ ಅನುಸೂಚಿಯಲ್ಲಿ ಕಾಣಿಸಿರುವ ಜಮೀನುಗಳನ್ನು ಸ್ವಾಧೀನ ಪಡಿಸಿಕೊಳ್ಳಬೇಕೆಂದು ಈ ಮೂಲಕ ಕರ್ನಾಟಕ ಸರ್ಕಾರವು ಘೋಷಿಸಿದೆ.

**ಅ ನು ಸೂ ಚಿ**

**ಗ್ರಾಮ : 167–ಸಜಿಪ ಮುನ್ನೂರು** **ಹೋಬಳಿ : ಪಾಣೆ ಮಂಗಳೂರು** **ತಾಲೂಕು : ಬಂಟ್ವಾಳ** **ಜಿಲ್ಲೆ : ದ.ಕ**

| ಕ್ರ. ಸಂ | ಖಾತೆದಾರರ ಹೆಸರು | ಅನುಭವದಾರರ ಹೆಸರು | ತರಹೆ | ಸರ್ವೆ ನಂಬರ್ | ಗಡಿಗಳು | | | | ಸ್ವಾಧೀನ ಪಡಿಸಿಕೊಳ್ಳುತ್ತಿರುವ ಜಮೀನು | | ಆಕಾರ ರೂ.ಪೈ |
|---|---|---|---|---|---|---|---|---|---|---|---|
| | | | | | ಉತ್ತರ | ಪೂರ್ವ | ದಕ್ಷಿಣ | ಪಶ್ಚಿಮ | ಖಾಸಗಿ ವಿಸ್ತೀರ್ಣ ಎ.ಸೆಂ | ಸರಕಾರಿ ವಿಸ್ತೀರ್ಣ ಎ.ಸೆಂ | |
| 1 | 2 | 3 | 4 | 5 | 6 | 7 | 8 | 9 | 10ಎ | 10ಬಿ | 11 |
| 1 | ದೇವಪ್ಪ ಮಡಿವಾಳ ಬಿನ್ ದೇಜು ಮಡಿವಾಳ, ಲಲಿತ ಯಾನೆ ಲತಾ, ದಿವ್ಯ, ಸುಮಂತ್, ಕಮಲ ಹೆಂಗ್ಸು ಕೋಂ ಸೇಸು ಮಡಿವಾಳ, ಯನ್ ರಾಮ ಬಿನ್ ತಿಮ್ಮಪ್ಪ, ಟಿ.ಕೆ.ಕಮಲ ಕೋಂ ಗುರುವಪ್ಪ. | ಕಲಂ 2 ರಂತೆ ಸೇವಾ ಸಹಕಾರಿ ಬ್ಯಾಂಕ್, ಪಾಣೆಮಂಗಳೂರು ಇವರಿಗೆ ಆಧಾರ. | ತರಿ | 162/1ಎ1 (ಅಂಶ) | 163/2ಎ | 162/1ಎ (ಅಂಶ) | 162/1ಎ (ಅಂಶ) | 163/2ಎ | 0.38 | – | 0.99 |
| 2 | ಮೈ. ವಸಂತ– ರಕ್ಷಕ ಗಾ. ವೆಂಕಟ್ರಾಯ, ಮೈ. ಸತೀಶ– ರಕ್ಷಕ ಗಾ.ವೆಂಟ್ರಾಯ, ಮೈ.ವಾಸುದೇವ– ರಕ್ಷಕ ಗಾ. ವೆಂಕಟ್ರಾಯ, ಕಮಲ ಹೆಂಗ್ಸು ಕೋಂ ಸೇಸು ಮಡಿವಾಳ, ಯನ್.ರಾಮ ಬಿನ್ ತಿಮ್ಮಪ್ಪ, ಸುಂದರ ಬಿನ್ ವೆಂಕಪ್ಪ ಮೂಲ್ಯ. | ಕಲಂ 2 ರಂತೆ ಸೇವಾ ಸಹಕಾರಿ ಬ್ಯಾಂಕ್, ಪಾಣೆಮಂಗಳೂರು ಇವರಿಗೆ ಆಧಾರ. | ಇ.ಭಾ | 162/2 (ಅಂಶ) | 162/1ಎ | 162/2 (ಅಂಶ) | 162/4 | 162/2 (ಅಂಶ) | 0.01 | – | 0.03 |
| 3 | ಮೈ. ವಸಂತ– ರಕ್ಷಕ ಗಾ. ವೆಂಕಟ್ರಾಯ, ಮೈ. ಸತೀಶ– ರಕ್ಷಕ ಗಾ.ವೆಂಟ್ರಾಯ, ಮೈ.ವಾಸುದೇವ– ರಕ್ಷಕ ಗಾ. ವೆಂಕಟ್ರಾಯ, ಕಿಟ್ಟಣ್ಣ ಮೂಲ್ಯ ಬಿನ್ ಐತ ಮೂಲ್ಯ, ಕಮಲ ಹೆಂಗ್ಸು ಕೋಂ ಸೇಸು ಮಡಿವಾಳ, ಸಹಾಯಕ ಕಾರ್ಯಕಾರಿ ಅಭಿಯಂತರರು ನಂ.2 ಕನನೀಸಮತ್ತು ಒಳಚರಂಡಿ ಮಂಡಳಿ ಉಪವಿಭಾಗ, ಯನ್. ರಾಮ ಬಿನ್ ತಿಮ್ಮಪ್ಪ, ಟಿ.ಕೆ.ಕಮಲ ಕೋಂ ಗುರುವಪ್ಪ. | ಕಲಂ 2 ರಂತೆ | ಖುಷ್ಕಿ | 162/4 (ಅಂಶ) | 162/2 | 162/4 (ಅಂಶ) | 116 | 162/4 (ಅಂಶ) | 0.02 | – | 0.02 |

